Sept 92

# ಮಾನಸಿ

ತಿಂಗಳ ಪತ್ರಿಕೆ ಸೆಪ್ಟೆಂಬರ್ 1992

# ಮಾನಸ


ಸಂಪುಟ : ೬ ಸಂಚಿಕೆ : ೯

ಸೆಪ್ಟೆಂಬರ್ - ೧೯೯೨





ವಿಳಾಸ :

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು–560 067

ಬಿಡಿ ಪ್ರತಿ : **2 ರೂ.**

ಸೂಚನೆ : ವಾರ್ಷಿಕ ಚಂದಾ : **20 ರೂ.**

ಆಜೀವ ಚಂದಾ : **250 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.

ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ.ಓ.
ಮೂಲಕ ಸ್ವೀಕರಿಸಲಾಗುವುದು.


**ಈ ಸಂಚಿಕೆಯಲ್ಲಿ....**



ಈ ಸಂಚಿಕೆಯನ್ನು ಸಂಪಾದಿಸಿದವರು
ಉಜ್ವಲಾ ಪುಣಜಗೌಡ


ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಎಚ್. ಎಸ್. ರಾಜೇಶ್ವರಿ, ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭



## ಸಂಪಾದಕೀಯ

ಪರಿಣಾಮದ ಹೆದರಿಕೆ ನಮ್ಮ ಹುಡುಗಿಯರ ಹೋರಾಟವನ್ನು ಮತ್ತಷ್ಟು ಕುಂಠಿತಗೊಳಿಸುತ್ತದೆ. ನಾವು ಜೀವನದಿಂದ ಬಯಸುತ್ತಿರುವುದು ಇದಲ್ಲ ಎಂಬ ಅರಿವು ಮೂಡಿರುತ್ತದೆ. ಎಷ್ಟು ದಿನ ಹೀಗೆಯೇ ಬದುಕಬೇಕು ? ಎಂದು ಜಾಗೃತ ಮನಸ್ಸು ಕೇಳುತ್ತದೆ. ಪರರ ಇಚ್ಛೆಯಂತೆಯೇ ಜೀವನವೆಲ್ಲವೂ ಸಾಗಬೇಕೇ ? ಹಾಗಾದರೆ ತನ್ನದೇನು ? ತಾನೇನನ್ನು ಕಲಿಯಬೇಕು ? ಎಷ್ಟು ಕಲಿಯಬೇಕು ? ಸ್ವಂತಕಾಲ ಮೇಲೆ ನಿಲ್ಲಬೇಕೇ ಬೇಡವೇ ? ಯಾರನ್ನು ಮದುವೆಯಾಗಬೇಕು ? ಎಷ್ಟು ಮಕ್ಕಳನ್ನು ಪಡೆಯಬೇಕು ? ಗಂಡಿರಬೇಕೇ ? ಹೆಣ್ಣಿರಬೇಕೇ ? ಎಲ್ಲವನ್ನೂ ನಿರ್ಧರಿಸುವವರು ಬೇರೆಯವರಾದರೆ ತನ್ನ ಅಸ್ತಿತ್ವವೇನು ? ಜೀವನವೆಲ್ಲ ಬೇರೆಯವರಿಗಾಗಿ ಬದುಕಿದರೆ ತಾನು ತನಗಾಗಿ ಬದುಕುವುದೆಂದು ? ಎಂಬ ನೂರು ಪ್ರಶ್ನೆಗಳು ಕಾಡುತ್ತವೆ. ಕಾಲನ ಕೊನೆಯಲ್ಲಿರುವ, ಒಂದು ಕ್ಷಣವಾದರೂ, ಸಾಕು ನಮಗೆ, ನಾವು ನಿಜವಾಗಿಯೂ, ಬದುಕಿ ಸಾಯಬಲ್ಲವೇ ? ಎಂಬ ಅಳಲು ಮೂಡುತ್ತದೆ. ಈಗ ತನಗಾಗಿ ಬದುಕಬೇಕು ಎಂಬ ನಿರ್ಧಾರವೇನೋ ಮೂಡುತ್ತದೆ. ಆದರೆ ಹೋರಾಟದ ದಾರಿಯಲ್ಲಿ ಅನೇಕ ಶತ್ರುಗಳು. ಯಶಸ್ಸು ಸಿಗದಿದ್ದರೆ, ಅವರಿವರು ಏನೆಂದಾರು ? ಎಂಬ ಹುಚ್ಚು ಹೆದರಿಕೆಗಳು.

ವಿನಾಕಾರಣ ಹೆದರಿಕೆಗಿದು ಸಮಯವಲ್ಲ. ಏನಾದರಾಗಲಿ ಎಂಬ ಛಲ ಇಲ್ಲಿ ಅನಿವಾರ್ಯ. "ನಾವು ನೋಡಬಯಸುತ್ತೇವೆ, ನಿಮ್ಮ ನೆರಳಿನ ಕತ್ತಲನ್ನಲ್ಲ, ಬಿರು ಬಿಸಿಲಿಗೆ ಮೈ ಸುಟ್ಟುಕೊಂಡರೂ, ನಾವು ಬೆಳಕನ್ನೇ ಕಾಣಬಯಸುತ್ತೇವೆ. ನಾವು ನಡೆಯಬಯಸುತ್ತೇವೆ. ನಿಮ್ಮ ಕಾಲಡಿಯ ದಾರಿಗಳಲ್ಲ, ನಮ್ಮದೇ ದಾರಿಗಳನ್ನು ಗುರುತಿಸಿಕೊಂಡು ಓಡಬಯಸುತ್ತೇವೆ" ಎಂಬ ಧ್ಯೇಯ ಮಾತ್ರ ನಮ್ಮನ್ನು ಗೆಲುವಿನತ್ತ ಒಯ್ಯಬಲ್ಲದು. ಒಂದು ಸಂಕೋಲೆ ಕಳಚಿಬಿದ್ದರೂ ಕೊಡುವುದು ಸ್ವಾತಂತ್ರ್ಯದ ಸುಖವನ್ನೇ, ಅಲ್ಲವೇ ?

"ಈ ಜಗತ್ತಿನ ಯಾವುದಾದರೂ ಮೂಲೆಯನ್ನು ನೀವು ಸುಧಾರಿಸುವದು ಸಾಧ್ಯವಿದ್ದರೆ ಅದು ನಿಮ್ಮನ್ನು ಮಾತ್ರ"

ಹೆಣ್ಣಿನ ಶೋಷಣೆಯನ್ನು ತಡೆಯಲು ಸಾಂಘಿಕವಾಗಿ ಎಷ್ಟೇ ಪ್ರಯತ್ನ ಗಳು ನಡೆದರೂ ಪ್ರತಿಯೊಬ್ಬ ಹೆಣ್ಣೂ ವೈಯಕ್ತಿಕವಾಗಿಯೇ ಈ ಹೋರಾಟ ವನ್ನು ಆರಂಭಿಸಬೇಕಾಗುತ್ತದೆ. ಏಕೆಂದರೆ ಹೆಣ್ಣಿನ ನಿರಂತರ ಶೋಷಣೆ ಆರಂಭ ಗೊಳ್ಳುವದು ಕುಟುಂಬದ ನಾಲ್ಕು ಗೋಡೆಗಳ ನಡುವೆ. ಅಸಮಾನತೆ ಬೇರಿರುವುದು ಮನೆಯಲ್ಲಿ.

ಹೋರಾಟದ ಮೊದಲ ಹಂತ ತನ್ನೊಡನೆ ತಾನು ಸೆಣಸುವುದು. ಸಾವಿರಾರು ವರುಷಗಳ ಹಿಂದಿನ ಪದರುಗಳನ್ನು ಕಳಚಿಕೊಂಡು ಹೊಸ ಹೆಣ್ಣಾಗುವುದು, ಒಬ್ಬ ವ್ಯಕ್ತಿಯಾಗಿ ಛಲ, ಧೈರ್ಯ ಬೆಳೆಸಿಕೊಳ್ಳುವುದು. ತಪ್ಪು, ಸರಿಗಳ ನಡುವಿನ ಅಂತರಗಳನ್ನು ಅರಿಯುವದು. ತನ್ನನ್ನು ತಾನೇ ಅರ್ಥಮಾಡಿಕೊಂಡ ನಂತರ ಎರಡನೇ ಹಂತ.

ಎರಡನೇ ಹಂತದಲ್ಲಿ ಪರಿಸರವನ್ನು ತನ್ನ ಅವಶ್ಯಕತೆಗಳಿಗನುಗುಣವಾಗಿ ಬದಲಿಸುವುದು. ಇದು ಬಹಳ ಕಠಿಣವಾದದ್ದು. ಈ ಹೋರಾಟ ವ್ಯಕ್ತಿಗಳ ವಿರುದ್ಧವಲ್ಲ ವಿಚಾರಗಳ ವಿರುದ್ಧ ; ಸಂಸ್ಕೃತಿಯ ವಿರುದ್ಧವಲ್ಲ, ಕಂದಾಚಾರ ಮೂಢನಂಬಿಕೆಗಳ ವಿರುದ್ಧ ; ಮಾನವೀಯತೆಗಾಗಿ, ಮಾನವರೊಡನೆ ಅಲ್ಲ; ಸ್ವಾತಂತ್ರ್ಯಕ್ಕಾಗಿ, ಸ್ವಚ್ಛಂದಕ್ಕಾಗಿ ಅಲ್ಲ. ಇದು ಬಹಳ ಕಠಿಣವಾದದ್ದು. ಏಕೆಂದರೆ ಇಲ್ಲಿ ಒಂದನ್ನೊಂದು ಬೇರ್ಪಡಿಸಬೇಕು ಬಹಳ ಸೂಕ್ಷ್ಮ ಕೆಲಸ. (ಇಲ್ಲಿ ಕಿತ್ತೂರು ಚೆನ್ನಮ್ಮ, ಬೆಳವಡಿ ಮಲ್ಲಮ್ಮ, ಜೋನ್ ಆಫ್ ಆರ್ಕ್, ಮದರ್ ಥೆರೇಸಾ ನಮಗೆ ಹೆಚ್ಚು ಸ್ಫೂರ್ತಿ ಕೊಡುತ್ತಾರೆ)

ಉಜ್ವಲ. ಜ. ಪುಣಜಗೌಡ
ಬೆಳಗಾವಿ

# ಅನ್ವರ್ಥ ನಾಮದ ಚಿತ್ರಕಾರ್ತಿ - ಅಮೃತಾ ಶೇರ್‌ಗಿಲ್

"ಅಮೃತಾ ಷೇರ್‌ಗಿಲ್‌ಗಳ ಮನೋಧರ್ಮ ಭಾರತದಲ್ಲಿನ ಬೆಡಗಿನ ರಂಗು ರಂಗಾದ ಪ್ರಕೃತಿ ಮತ್ತು ಜೀವನ ಚಿತ್ರಗಳನ್ನು ಬರೆಯಲು ಬಹಳ ಉಪಯುಕ್ತವಾದುದು. ಪಶ್ಚಿಮದ (ಯೂರೋಪಿನ) ಸ್ಟುಡಿಯೋಗಳಲ್ಲಿನ ಬೂದು ಬಣ್ಣದ ವರ್ಣಛಾಯೆಗಳಿಗೆ ಸರಿಹೊಂದದು" -ಇದು ಅಮೃತಾ ಶೇರ್‌ಗಿಲ್‌ರ ಪ್ರೊಫೆಸರ್ ಒಬ್ಬರು ಆಕೆಯ ಕಲಾ ಕೌಶಲ್ಯಕ್ಕೆ ನೀಡಿದ ವ್ಯಾಖ್ಯಾನ. ಅಮೃತಾ ಶೇರ್‌ಗಿಲ್ ಒಬ್ಬ ಜನ್ಮ ಜಾತ ಕಲಾವಿದೆ. 29 ವರ್ಷಗಳ ತಮ್ಮ ಅಲ್ಪ ಕಾಲದ ಬಾಳುವೆಯಲ್ಲಿ ಆಕೆ 'ಸುಪ್ರಸಿದ್ಧ ಕಲಾವಿದೆ' ಎಂಬ ಗೌರವಕ್ಕೆ ಪಾತ್ರರಾಗಿದ್ದರು. ಸುಪ್ರಸಿದ್ಧ ಚಿತ್ರ ವಿಮರ್ಶಕರಾದ ಕಾರ್ಲ್‌ಖಂಡೇಲ್‌ವಾಲಾ ಆಕೆಯ ಆತ್ಮೀಯರೂ ಹೌದು, ಪ್ರೋತ್ಸಾಹಕರೂ ಹೌದು. ಪಂಡಿತ ಜವಹರಲಾಲ್ ನೆಹರೂ ಆಕೆಯ ಚಿತ್ರಗಳನ್ನು ಬಹುವಾಗಿ ಮೆಚ್ಚಿಕೊಂಡಿದ್ದರು. ಭಾರತೀಯ ಚಿತ್ರ ವಿಮರ್ಶಕರಲ್ಲಿ ಕೆಲವರು ಆಕೆಯನ್ನು 'ಭಾರತೀಯ ಚಿತ್ರಕಾರ್ತಿ' ಎಂಬುದನ್ನು ನಿರಾಕರಿಸಿದ್ದರು. (ಪಾಲ್ ಸಜಾನ್, ಪಾಲ್ ಗೋಗನ್‌ರ ವಿಧಾನಗಳು ಆಕೆಯ ಚಿತ್ರ ಕೃತಿಗಳಲ್ಲಿ ಛಾಯೆಗಳಾಗಿ ಬರುವುದು ಹೌದು. ಆದರೆ ಈ ಕಾರಣಕ್ಕಿಂತ ಹೆಚ್ಚಾಗಿ ಅಂದಿನ ದಿನಗಳಲ್ಲಿ ಹೆಚ್ಚು ಹೆಸರು ಮಾಡಿದ್ದ 'ಬೆಂಗಾಲ್ ಸ್ಕೂಲ್ ಆಫ್ ಪೇಂಟಿಂಗ್ಸ್' ಬಗ್ಗೆ ಕುರಿತು ಆಕೆ ನೀಡಿದ ವಿಮರ್ಶೆಯೇ ಕಾರಣ ಎನ್ನಬಹುದು.)

ಆಕೆಯ ಕಲಾಶಿಕ್ಷಣ ನಡೆದದ್ದು ಪಾಶ್ಚಾತ್ಯ ದೇಶದಲ್ಲಿ ನಿಜ. ಆದರೂ ಆಕೆ ಭಾರತದಲ್ಲೆಲ್ಲ ಸುತ್ತಾಡಿ 2000 ವರ್ಷಗಳ ಕಲಾಪರಂಪರೆಗೆ ಸಂಬಂಧಿಸಿದ ಉತ್ತಮ ಅಂಶಗಳನ್ನೆಲ್ಲ ರಕ್ತಗತ ಮಾಡಿಕೊಂಡಿದ್ದರು. ಹಾಗಾಗಿ ಆಕೆಯ ಚಿತ್ರಗಳು ಪಾಶ್ಚಾತ್ಯ ಪ್ರಕಾರದವಾಗಿದ್ದರೂ ಭಾರತೀಯ ಶೈಲಿಯನ್ನು ಮೈಗೂಡಿಸಿಕೊಂಡಿವೆ. ಈ ಎರಡೂ ರೀತಿಯನ್ನು ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ಅಳವಡಿಸಿಕೊಂಡು ಹೊಸ ನಮೂನೆಯ 'ಕಲಾಸಂಗಮ' ವಾಗುವಂತೆ ಮಾಡಿದ ಕೀರ್ತಿ ಆಕೆಯದು. ಭಾರತದ ಆಧುನಿಕ ಚಿತ್ರಕಲೆಯಲ್ಲಿ ಆಕೆಯದು ಮರೆಯಲಾಗದ ಹೆಸರು, ಉನ್ನತ ಸ್ಥಾನ.

ಅಪಾರ ಆತ್ಮವಿಶ್ವಾಸ, ಬುದ್ಧಿಕೌಶಲ್ಯಗಳ ಸೌಂದರ್ಯವತಿ ಅಮೃತಾ ಶೇರ್‌ಗಿಲ್ ತುಂಬ ಸ್ವಾಭಿಮಾನಿ, ನಿಷ್ಪಕ್ಷಪಾತ ವಿಮರ್ಶಕ ದೃಷ್ಟಿ. 20ನೇ ವಯಸ್ಸಿನಲ್ಲಿಯೇ ಪ್ಯಾರಿಸಿನ 'ಗ್ರ್ಯಾಂಡ್ ಸೆಲೋ'ದ ಸದಸ್ಯತ್ವಕ್ಕೆ ಪಾತ್ರರಾಗಿದ್ದರು. ಆಕೆಯ ನಿಷ್ಪಕ್ಷಪಾತ ವಿಮರ್ಶಾ ದೃಷ್ಟಿಗೆ ಒಂದು ಸಣ್ಣ ನಿದರ್ಶನ : ಒಮ್ಮೆ ಸಿಮ್ಲಾದಲ್ಲಿ ಆಕೆಯ ಚಿತ್ರ ಪ್ರದರ್ಶನ ನಡೆಯಿತು. ಆಕೆ ಅತ್ಯುತ್ತಮದೆಂದು ಭಾವಿಸಿದ್ದ ಚಿತ್ರಗಳನ್ನು ಬಿಟ್ಟು ಬೇರೆ ಚಿತ್ರಕ್ಕೆ ಬಹುಮಾನ ಬಂತು. ವ್ಯವಸ್ಥಾಪಕರ ಈ ತೀರ್ಮಾನ ಆಕೆಗೆ ಒಪ್ಪಿತವಾಗದೆ ಬಹುಮಾನವನ್ನೆ ಹಿಂತಿರುಗಿಸಿದರು ಆಕೆ. ವಿಮರ್ಶೆಯನ್ನು ಸದಾ ಸ್ವಾಗತಿಸುತ್ತಿದ್ದ ಅಮೃತಾಶೇರ್‌ಗಿಲ್‌ರ ತಂದೆ, ಉಮ್ರಾವ್ ಸಿಂಗ್‌ಶೇರ್‌ಗಿಲ್, ತಾಯಿ ಹಂಗರಿಯ ಮೇರಿ ಆಂಟಿನೆಟ್. 1913ರ ಜನವರಿ 20ರಂದು ಬುಡಾಪೆಸ್ಟಿನಲ್ಲಿ ಜನಿಸಿದ ಅಮೃತಾಶೇರ್‌ಗಿಲ್ 8 ವರ್ಷಗಳವರೆಗೂ ಹಂಗೇರಿಯಲ್ಲೇ ನೆಲೆಸಬೇಕಾಯ್ತು. ಹಂಗೇರಿಯ ಜನರ ಸಾಂಪ್ರದಾಯಿಕ ವಾತಾವರಣಗಳು ಆಕೆಯ ಮನದ ಮೇಲೆ ಗಾಢ ಪ್ರಭಾವ ಬೀರಿದ್ದವು. ತನ್ನ 5ನೇ ವಯಸ್ಸಿನಲ್ಲೇ ವರ್ಣಚಿತ್ರ ರಚಿಸುತ್ತಿದ್ದರು. ಆ ಸಮಯದಲ್ಲಿ 1ನೇ ಮಹಾಯುದ್ಧದ ಭೀತಿಯಿಂದ ಕಂಗೆಟ್ಟಿದ್ದ ಈ ಕುಟುಂಬ ಬಹಳ ತ್ರಾಸದಿಂದ ಜೀವನವನ್ನು ಸಾಗಿಸಬೇಕಾಗಿತ್ತು. ಅದರ ಛಾಯೆ, ಆಕೆ ಮೊದಮೊದಲು ಚಿತ್ರಿಸಿದ ಚಿತ್ರಗಳಲ್ಲಿ ಸ್ಪಷ್ಟವಾಗಿ ಎದ್ದು ಕಾಣುತ್ತದೆ.

ಈಕೆಗೆ ಚಿತ್ರಕಲೆಯಲ್ಲಿ ಅತಿ ಆಸಕ್ತಿಯಿರುವುದನ್ನು ಗಮನಿಸಿದ ತಾಯಿ-ತಂದೆ ಆಕೆ ಚಿತ್ರಕಲೆ ಕಲಿಯಲು ಸಾಕಷ್ಟು ಪ್ರೋತ್ಸಾಹಿಸಿದ್ದರು. ಆಕೆಗೆ ಶಾಲೆಯ ಸಾಂಪ್ರದಾಯ ಶಿಕ್ಷಣ ಒಗ್ಗಿಬರಲಿಲ್ಲ. ಅದನ್ನು ವಿರೋಧಿಸಿದ್ದರು, ಶಾಲೆಯಿಂದ ಹೊರಬಂದಿದ್ದರು. ಆಕೆಗೆ 16 ವರ್ಷವಾಗಿದ್ದ ಸಮಯದಲ್ಲಿ ಆಕೆಯ ತಾಯಿ ಆಂಟಿನೆಟ್ ಮಗಳನ್ನು ಯುರೋಪಿನ ಕಲಾ ಪ್ರಪಂಚದ ರಾಜಧಾನಿಯೆನಿಸಿಕೊಳ್ಳುತ್ತಿದ್ದ ಪ್ಯಾರಿಸ್‌ಗೆ ಚಿತ್ರಕಲಾ ಶಿಕ್ಷಣವನ್ನು ಕೊಡಿಸಲು ಕರೆದೊಯ್ದರು. ಆಕೆಯ ಜೊತೆಗೆ ಆಕೆಯ ತಂಗಿ ಇಂದಿರಾ ಅವರನ್ನೂ

ಕರೆದೊಯ್ದಿದ್ದರು. ತಾಯಿಯ ಒತ್ತಾಸೆಯಿಂದ ಸಂಗೀತ, ನಾಟಕಗಳಲ್ಲಿ ಸಾಕಷ್ಟು ಪರಿಶ್ರಮವಿತ್ತು. ಮಕ್ಕಳ 'ಕಲಾ ಪ್ರದರ್ಶನ'ವನ್ನು ಆಗಾಗ ಏರ್ಪಡಿಸುತ್ತಿದ್ದರು ಆಕೆ. ಇದು ಎಲ್ಲರ ಪ್ರಶಂಸೆಗೆ ಕಾರಣವಾಗಿತ್ತು. ಚಿತ್ರಕಲೆ ಯೊಂದಿಗೇ ಸಂಗೀತ ಶಿಕ್ಷಣವನ್ನೂ ಈ ಮೊದಲು ಅಮೃತಾ ಪಡೆಯುತ್ತಿದ್ದರು. ನಂತರ ತನ್ನ ಜೀವನವನ್ನು ತನ್ನ ಪ್ರೀತಿಪಾತ್ರವಾದ ಚಿತ್ರಕಲೆಗೇ ಮುಡುಪಿಟ್ಟರು.

1930-32ರೊಳಗೆ ಅನೇಕ ವರ್ಣಚಿತ್ರಗಳನ್ನು ಬರೆದು ರಚಿಸಿದ್ದರು, 30ರಲ್ಲಿ ತೈಲಚಿತ್ರಗಳಲ್ಲೂ ಶಿಕ್ಷಣ ಪಡೆದರು. ಈ 2-3 ವರ್ಷಗಳ ಅವಧಿಯಲ್ಲಿ ರಚಿತವಾದ ಚಿತ್ರಗಳು ಎಲ್ಲರ ಪ್ರಶಂಸೆಗೆ ಪಾತ್ರವಾಗಿದ್ದವು. 'ಚಿಕ್ಕ ಹುಡುಗಿಯರು'–ಚಿತ್ರಕ್ಕೆ ಪ್ಯಾರಿಸಿನ ಚಿತ್ರ ಪ್ರದರ್ಶದದಲ್ಲಿ ಚಿನ್ನದ ಪದಕದ ಬಹುಮಾನ ಲಭಿಸಿತ್ತು. ಆಕೆ 'ಗ್ರ್ಯಾಂಡ್ ಸೆಲೋ'ಗೆ ಗೌರವ ಸದಸ್ಯೆಯಾಗಿ ಆಯ್ಕೆಯಾದದ್ದೂ ಆಗಲೇ. ಆಕೆ ಪ್ಯಾರಿಸ್‌ನಲ್ಲಿದ್ದಷ್ಟು ಕಾಲವೂ ಪ್ರತಿವರ್ಷ ಹಂಗೇರಿಗೆ ಹೋಗಿ ಬರುತ್ತಿದ್ದರು. ಆ ಜನರ ಮುಗ್ಧತೆ, ಪ್ರಾಮಾಣಿಕತೆಗಳನ್ನು ಬಹಳ ಮೆಚ್ಚುತ್ತಿದ್ದ ಆಕೆ ಅಪಾರ ಸಾಹಿತ್ಯ ಪ್ರೇಮಿಯೂ ಆಗಿದ್ದರು. ಭಾರತದ ಬಗ್ಗೆಯೂ ಅಪಾರ ವಿಶ್ವಾಸ, ಆದರಗಳನ್ನು ಬೆಳೆಸಿಕೊಂಡಿದ್ದ ಈಕೆ, ಯೂರೋಪ್ ಖಂಡ ಪಿಕಾಸೋ, ಮಟಿಸ್ಸ ಮುಂತಾದವರಿಗೆ ಸೇರಿದ್ದು, ಆದರೆ ಭಾರತ ಮಾತ್ರ ತಮಗೇ ಸೇರಿದ್ದು ಎಂದು ತಮ್ಮ ತಾಯಿಗೆ ಬರೆದ ಪತ್ರದಲ್ಲಿ ತಿಳಿಸಿದ್ದಾರೆ.

ಭಾವಜೀವಿಯಾಗಿದ್ದ ಅಮೃತಾ ತಮ್ಮ ಚಿತ್ರಗಳಲ್ಲಿ ಗಾಢವರ್ಣಗಳನ್ನು ಹೆಚ್ಚಾಗಿ ಬಳಸುತ್ತಿದ್ದರು. ಈಕೆಯ ಚಿತ್ರಗಳಿಗೆ ವಿಷಾದದ ಛಾಯೆ ಸಾಮಾನ್ಯವಾಗಿ ಕಂಡುಬರುತ್ತದೆ. ವರ್ಣ ತೀವ್ರತೆ ಹೆಚ್ಚಾದಷ್ಟೂ ವಿಷಾದ ಭಾವ ಗಾಢವಾಗಿ ಕಂಡುಬರುತ್ತದೆ. ತಮ್ಮ 11ನೇ ವಯಸ್ಸಿನಿಂದ 14ರ ವಯಸ್ಸಿನವರೆಗೆ ಸೃಷ್ಟಿಯಾದ ಚಿತ್ರಗಳಲ್ಲಂತೂ ಆಕೆಯ ಮನಸ್ಸಿನಲ್ಲಿನ ಚಿಂತೆ, ದುಗುಡ, ದುಃಖ ಚಿತ್ರಗಳ ವ್ಯಕ್ತಿಗಳ ಮುಖದಲ್ಲಿ ಎದ್ದು ಕಾಣುತ್ತದೆ. ಆಗಿನ ಚಿತ್ರಗಳು ಹಂಗೇರಿಯಲ್ಲಿನ ಜೀವನದ ದೃಶ್ಯಗಳು. ಆಕೆಯ ಮನದ ಮೇಲೆ ಬೀರಿದ ಪರಿಣಾಮದ ಪ್ರತಿಸೃಷ್ಟಿ ಎಂದೆನ್ನಬಹುದು.

ಸೂಕ್ಷ್ಮ ಪ್ರಕೃತಿಯ ಅಮೃತಾ ಪ್ರತಿಯೊಂದನ್ನೂ ಸೂಕ್ಷ್ಮವಾಗಿ ಅವಲೋಕಿಸುತ್ತಿದ್ದರು. ತಮ್ಮ ಸುತ್ತ ಮುತ್ತಲ ಜನರ, ಪ್ರಕೃತಿಯ ಎಲ್ಲ ಅಂಶಗಳನ್ನೂ ತಮ್ಮ ಚಿತ್ರದಲ್ಲಿ ಒಳಗೊಳ್ಳುವಂತೆ ಮಾಡುತ್ತಿದ್ದರು. ಚಿತ್ರದಲ್ಲಿ ಬರುವ ವ್ಯಕ್ತಿಗಳ ಭಾವವನ್ನು ಅತಿ ಸುಂದರವಾಗಿ ಚಿತ್ರಿಸುತ್ತಿದ್ದರು. ಉದಾ :–ಮದುವೆಯ ಮಂಟಪದಲ್ಲಿ ಇರುವ ಒಂದು ಭಾರತೀಯ ಹೆಣ್ಣು–ತನಗಿಷ್ಟವಿಲ್ಲದ ವರರನ್ನು ಬಂಧು-ಬಳಗದ ಬಲವಂತದಿಂದ ಮದುವೆಯಾಗಲು ಹೊರಟ ಸುಂದರ ರಾಜ ಕುಮಾರಿ ವಧುವಿನ ನೀರವತೆ, ದುಃಖ, ಅಸಹಾಯಕತೆಗಳನ್ನು ಸ್ಪಷ್ಟವಾಗಿ ಬಿಂಬಿಸುತ್ತದೆ. ಭಾರತದ ಸಾಮಾನ್ಯ ಜನರನ್ನು ತನ್ನ ಚಿತ್ರಗಳಲ್ಲಿ ತರಲು ತುಂಬ ಆಸಕ್ತಿ ತೋರುತ್ತಿದ್ದ ಅಮೃತಾ ಶೇರ್‌ಗಿಲ್ 'ಮದರ್ ಇಂಡಿಯಾ', 'ಭಿಕ್ಷುಕರು', 'ಸೂರ್ಯಕಾಂತಿ ಹೂವನ್ನು ಹಿಡಿದ ಹೆಂಗಸು' ಇತ್ಯಾದಿ ಚಿತ್ರಗಳನ್ನು ಚಿತ್ರಿಸಿದ್ದಾರೆ. 'ಬೆಟ್ಟಗಳಲ್ಲಿನ ಹೆಂಗಸರು,' 'ಬೆಟ್ಟಗಳಲ್ಲಿನ ಗಂಡಸರು' ಆಕೆಯ ಅತ್ಯುತ್ತಮ ರಚನೆಗಳ ಸಾಲಿಗೆ ಸೇರಿವೆ, ಮಾರಾಟದ ದೃಷ್ಟಿಯಿಂದ ರಚಿಸಿದ ಚಿತ್ರಗಳೂ ಹಲವಿವೆ.

ಪ್ಯಾರಿಸ್‌ನಲ್ಲಿದ್ದಾಗಲೇ ಆಕೆ ಭಾರತದ ಪ್ರಖ್ಯಾತ ಸ್ಥಳಗಳ ಬಗ್ಗೆ, ಚಿತ್ರಕಲೆಯ ಬಗ್ಗೆ ಕೇಳಿದ್ದರು. ಭಾರತಕ್ಕೆ ಬಂದ ಮೇಲೆ ಕೆಲಸಮಯದ ನಂತರ ಆಕೆ ಅತೃಪ್ತಿ, ಅಸಂತುಷ್ಟಿಯಿಂದಾಗಿ ಚಿತ್ರರಚನೆಯನ್ನು ನಿಲ್ಲಿಸಿಬಿಟ್ಟಿದ್ದಾಗ ಸ್ಥಳ ಸಂದರ್ಶನಕ್ಕೆ ಹೊರಟರು. 'ಕಲಾ ಯಾತ್ರೆ' ಎಂದೆನ್ನಬಹುದು. ಎಲ್ಲವನ್ನೂ ಸದರ್ಶಿಸುತ್ತಾ, ಅಜಂತಾ ಎಲ್ಲೋರಾಗಳಿಗೆ ಬಂದಾಗ ಆಕೆ ಅಲ್ಲಿನ ಗುಹಾಂತರ್ದೇವಾಲಯಗಳ ಶಿಲ್ಪಚಿತ್ರ, ಶಿಲ್ಪ ಕಲೆಗಳಿಂದ ತುಂಬಾ ಪ್ರಭಾವಿತರಾದರು. ದಕ್ಷಿಣ ಭಾರತದ ದೇವಾಲಯಗಳ ಶಿಲ್ಪ ಸೌಂದರ್ಯ, ಜನರ ನಡೆ ನುಡಿ, ಆಚಾರ, ಉಡುಗೆ, ತೊಡಿಗೆಗಳಿಂದಲಂತೂ ಎಷ್ಟು ಪ್ರಭಾವಿತರಾದರೆಂದರೆ, ಮುಂದೆ ಆಕೆ ರಚಿಸಿದ ಹಲವಾರು ವರ್ಣ ಚಿತ್ರಗಳಲ್ಲಿ ಇವುಗಳ ಪ್ರಭಾವವನ್ನು ಕಾಣಬಹುದಾಗಿದೆ. 'ಹಣ್ಣು ಮಾರುವವರು', ಮದುವೆಯ ಹೆಣ್ಣು ಅಲಂಕಾರ ಗೃಹದಲ್ಲಿ', 'ಬ್ರಹ್ಮಚಾರಿಗಳು', 'ಅಂಗಡಿ ಸಾಲಿಗೆ ಹೋಗುತ್ತಿರುವ ದಕ್ಷಿಣ ಭಾರತದ ಹಳ್ಳಿಗರು' ಇತ್ಯಾದಿಗಳು. 'ಬ್ರಹ್ಮಚಾರಿಗಳು' ಆಕೆಯ ಕೃತಿಗಳಲ್ಲೆಲ್ಲ ಶ್ರೇಷ್ಠವಾದುದೆಂಬ ಮಾತಿದೆ. ಉತ್ತರ ಪ್ರದೇಶದ ಸರಯಾದಲ್ಲಿ ಆಕೆಯ

ದೊಡ್ಡಪ್ಪನ ಜಹಗೀರಿನಲ್ಲಿ ವಾಸಿಸುತ್ತಿದ್ದಾಗ ಅಲ್ಲಿ 'ಮಾಡೆಲ್'ಗಳನ್ನಿಟ್ಟುಕೊಂಡು 'ಹಸಿರು ಕೊಳದಲ್ಲಿ ಸ್ನಾನ ಮಾಡುವ ಆನೆಗಳು', 'ಕೆಂಪು ಮಣ್ಣಿನ ಆನೆ', 'ಕೆಂಪು ಕಂಬಗಳಿರುವ ವೆರಾಂಡ' ಇತ್ಯಾದಿ ಚಿತ್ರಗಳನ್ನು ಚಿತ್ರಿಸಿದರು.

ತಮ್ಮ 25ನೇ ವಯಸ್ಸಿನಲ್ಲಿ ತನ್ನ ಆಸೆ ಆಕಾಂಕ್ಷೆಗಳಿಗೆ ತಕ್ಕವರನ್ನೇ ಮದುವೆಯಾಗಬೇಕೆಂದು, ತಾಯಿಯ ಕಡೆಯ ನೆಂಟನಾದ ಡಾ॥ ವಿಕ್ಟರ್ ಏಗಾನ್‌ರನ್ನು ಮದುವೆಯಾದರು. ಆಕೆಯ ಮದುವೆ ಹಂಗೇರಿಯಲ್ಲೇ ನಡೆಯಿತು. ಆ ಒಂದು ವರ್ಷ ಕಾಲ ಹಂಗೇರಿಯಲ್ಲಿದ್ದರು. ಸಮಯದಲ್ಲಿ ಹಂಗೇರಿಯ ಅನೇಕ ಚಿತ್ರಕಾರರನ್ನು ಭೇಟಿ ಮಾಡಿದರು. ಹಾಗೂ ಅನೇಕ ವರ್ಣ ಚಿತ್ರಗಳನ್ನು ರಚಿಸಿದರು. 2ನೇ ಮಹಾಯುದ್ಧದ ಸಮಯದಲ್ಲಿ ಅಲ್ಲಿರುವುದು ಅಸಾಧ್ಯವಾಗಿ ಮತ್ತೆ ಭಾರತಕ್ಕೆ ಹಿಂದಿರುಗಬೇಕಾಯಿತು. ಸಿಮ್ಲಾದಲ್ಲಿ ಸ್ವಲ್ಪ ಕಾಲ ಇದ್ದು ಮತ್ತೆ ಸರಯಾಗೆ ಬಂದು ಉಳಿದರು.

ತೀರ ಹಿಂದುಳಿದ ಹಳ್ಳಿಯಾಗಿದ್ದ ಸರಯಾದಲ್ಲಿ ಅನಾರೋಗ್ಯ, ಬಡತನ, ಅಶುಚಿಗಳು ಮನೆಮಾಡಿದ್ದವು. ವಿದ್ಯುಚ್ಛಕ್ತಿಯ ಕೊರತೆ ಇತ್ತು. ಪ್ರಕೃತಿ ಸೌಂದರ್ಯದ ಸೊಬಗು ಮಾತ್ರವೇ ಅಲ್ಲಿದ್ದ ಒಂದು ಆಕರ್ಷಣೆ. ಕೆಲಕಾಲ ಅಲ್ಲಿ ಸುಖವಾಗಿ ಕಳೆದರು ದಂಪತಿಗಳು. ಆ ಸಮಯದಲ್ಲಿ 'ಹಳೆಯ ಕಾಲದ ಕತೆ ಹೇಳುವವನು', 'ಆನೆಗಳ ವಿಹಾರ', 'ಉಯ್ಯಾಲೆ', 'ಮದುವಣಗಿತ್ತಿ' 'ಮಂಚದ ಮೇಲೆ ವಿಶ್ರಮಿಸಿರುವ ಹೆಂಗಸು' ಮುಂತಾದ ವರ್ಣ ಚಿತ್ರಗಳು ಬರೆಯಲ್ಪಟ್ಟವು. ಈ ಚಿತ್ರಗಳಲ್ಲಿ ಬಂಗಲೆಗಳ ಕೆಲಸದ ಹೆಂಗಸರು, ಮನೆಯ ಮೇಲ್ವಿಚಾರಣೆಗೆ ಇದ್ದ ಹೆಂಗಸರು, ಸಂಬಂಧಿಕರ ಪೈಕಿ ಇದ್ದ ಮಹಿಳೆಯರುಗಳ ನಡುವೆ ಅಪ್ತವಾಗಿ ಬೆರೆತು, ಭಾರತೀಯ ಮಹಿಳೆಯರ ಸಾಮಾಜಿಕ ಸ್ಥಾನಮಾನ, ಅವರ ಕಷ್ಟಗಳು, ಸಮಸ್ಯೆಗಳು, ಆಚಾರಗಳಲ್ಲಿನ ಲೋಪದೋಷಗಳನ್ನು ಅರ್ಥ ಮಾಡಿಕೊಂಡು ಅವುಗಳನ್ನು ತಮ್ಮ ಚಿತ್ರಗಳಲ್ಲಿ ಸೂಕ್ಷ್ಮವಾಗಿ ಬಿಡಿಸಿದ್ದಾರೆ. ಸರಯಾದಲ್ಲಿ ಆಕೆಯ ಪತಿ ಹಗಲಿರುಳೂ ರೋಗಿಗಳ ಶುಶ್ರೂಷೆಯಲ್ಲಿರುತ್ತಿದ್ದುದರಿಂದ ಆಕೆಯನ್ನು ಬಡತನದ ನೋವು, ಭಯ, ಅತೃಪ್ತಿಗಳು ಕಾಡತೊಡಗಿದವು. ಹೀಗಾಗಿ ಚಿತ್ರ ರಚನೆಗೆ ತಡೆಯುಂಟಾಯಿತು. ನಂತರ ದಂಪತಿಗಳು ಲಾಹೋರ್‌ಗೆ ಪ್ರಯಾಣಿಸಿದರು.

ಲಾಹೋರ್ ಅಂದಿನ ದಿನಗಳಲ್ಲಿ ಸ್ವಾತಂತ್ರ್ಯ ಚಳವಳಿಗಾರರ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳ ನೆಲೆವೀಡಾಗಿತ್ತು. ಅಲ್ಲಿ ಆಕೆಗೆ ಹಲವರ ಪರಿಚಯವಾಯಿತು. ಆಕಾಶವಾಣಿಯಲ್ಲಿ ಭಾಷಣ ಮಾಡುವ, ಚಿತ್ರ ಪ್ರದರ್ಶನಗಳನ್ನು ಪದೇ ಪದೇ ಏರ್ಪಡಿಸುವ ಅವಕಾಶಗಳೂ ಹೇರಳವಾಗಿ ಒದಗಿತು. ಈ ಸಮಯದಲ್ಲಾಗಲೇ ಸಾಕಷ್ಟು ಪ್ರಸಿದ್ಧಿ ಪಡೆದಿದ್ದ ಶೇರ್‌ಗಿಲ್ ಇನ್ನೂ ಹೆಚ್ಚು ಕೀರ್ತಿಶಾಲಿಯಾದರು. ಆಗ ಆಕೆಗೆ ಕೇವಲ 28 ವರ್ಷ. ಈ ವೇಳೆಗಾಗಲೇ ಆಕೆ 140ಕ್ಕೂ ಹೆಚ್ಚು ವರ್ಣ ಚಿತ್ರಗಳನ್ನು ರಚಿಸಿದ್ದರು. 1941ರ ಡಿಸೆಂಬರ್‌ನಲ್ಲಿ ಲಾಹೋರ್‌ನಲ್ಲಿ ಈಕೆಯ ವರ್ಣಚಿತ್ರಗಳ ಭಾರೀಕಲಾಪ್ರದರ್ಶನ ಏರ್ಪಾಡಾಗಿತ್ತು. ಆ ಚಿತ್ರ ಪ್ರದರ್ಶನದ ಕೇಂದ್ರಬಿಂದುವಾದ ಅಮೃತಾ ಶೇರ್‌ಗಿಲ್ ಕ್ರೂರ ವಿಧಿಯ ಪಾಲಾದರು. ಆಕೆಗೆ ಆಗ ಕೇವಲ 29 ವರ್ಷವಾಗಿತ್ತಷ್ಟೆ. ಪ್ರದರ್ಶನ ನಿಲ್ಲದೆ ಆಕೆಯ ಅನುಪಸ್ಥಿತಿಯಲ್ಲಿ ನಡೆದೇ ನಡೆಯಿತು.

ಸಾವಿಗೆ ಮುನ್ನ ಆಕೆ ಒಂದು ಅದ್ಭುತ ಚಿತ್ರವನ್ನು ಪ್ರಾರಂಭಿಸಿದ್ದರು. ಆಕೆಯ ಮರಣದಿಂದಾಗಿ ಅರ್ಧಕ್ಕೇ ನಿಂತು, ಆ ಚಿತ್ರದಂತೇ ಅದ್ಭುತ ಪ್ರತಿಭೆಯ ಬಾಳು ಅಲ್ಪ ಕಾಲದಲ್ಲೇ ಕೊನೆಯುಸಿರೆಳೆದುದಕ್ಕೆ ಸಾಕ್ಷಿ ಸಾರುತ್ತಿದೆ. ಜನ್ಮಜಾತ ಅಸಾಧಾರಣ ಪ್ರತಿಭಾವಂತೆಯ ಮರಣ ಭಾರತೀಯ ಚಿತ್ರ ಪ್ರಪಂಚಕ್ಕೆ ತುಂಬಲಾಗದ ನಷ್ಟ.

ತೀರ ಅಲ್ಪಾವಧಿಯಲ್ಲಿ ಆಕೆ ಸಾಧಿಸಿದ ಸಾಧನೆ, ಏರಿದ ಕೀರ್ತಿ ಶಿಖರ ಆಕೆಯನ್ನು ಅಸಾಮಾನ್ಯರ ಸಾಲಿಗೆ ಸೇರಿಸಿದೆ. ಭಾರತದ ಆರು ಮಂದಿ ಶ್ರೇಷ್ಠ ಕಲಾಕಾರರಲ್ಲಿ ಈಕೆಯೂ ಒಬ್ಬರು. ಸಾಮಾನ್ಯವಾಗಿ ಮರಣ ನಂತರ, ವ್ಯಕ್ತಿತ್ವದ ಅಸ್ತಿತ್ವವೇ ಅಳಿಯುತ್ತದೆ. ತೀರ ಅಪರೂಪಕ್ಕೆ ಮರಣ ನಂತರ ವ್ಯಕ್ತಿಯ ಪ್ರತಿಭೆ ಮಾತ್ರ ಜೀವಿಸುವುದುಂಟು. ಅಮೃತಾರವರಿಗೂ ಈ ಮಾತು ಅನ್ವಯಿಸುತ್ತದೆ. ಸಣ್ಣ ವಯಸ್ಸಿನಲ್ಲಿ ಅದ್ವಿತೀಯ ಸಾಧನೆ ನಡೆಸಿ ಅಲ್ಪಾಯುಸ್ಸಿನಲ್ಲಿ ಮರಣಿಸಿದರು. ಎಂದೆಂದಿಗೂ ಮರೆಯಲಾಗದಂಥ, ಅಳಿಸಲಾಗದಂಥ ಹೆಜ್ಜೆ ಗುರುತುಗಳನ್ನು ಮೂಡಿಸಿರುವ ಅಮೃತಾ ಶೇರ್‌ಗಿಲ್ ಶ್ರೀನಿವಾಸ ರಾಮಾನುಜರಂಥ ಕೀರ್ತಿಶೇಷರುಗಳ ಸಾಲಿಗೇ ಸೇರಿದ್ದಾರೆ. ಆಕೆಯ ಚಿತ್ರಗಳ ಸರಿಯಾದ ವಿಮರ್ಶೆ ನಡೆದಿಲ್ಲ. ಇನ್ನಾದರೂ ಆ ಬಗ್ಗೆ

ಗಮನ ಹರಿಸಬಹುದು. ಆದರೆ ನಮ್ಮಲ್ಲಿ ಯಾವುದೇ ರಂಗ ದಲ್ಲಾಗಲಿ, ಕೆಲಪೂರ್ವಾಗ್ರಹಗಳು. ಮೌಢ್ಯಗಳು ಮನೆ ಮಾಡಿರುತ್ತವಾದ್ದರಿಂದ ಇಂಥ ಅಸಾಮಾನ್ಯ ಕಲಾಕಾರ ರನ್ನು ನಿಷ್ಪಕ್ಷಪಾತ ಧೋರಣೆಯಿಂದ ಕಾಣುವುದಿರಲಿ, ಟೀಕಿಸುವುದೇ ಹೆಚ್ಚು.

ದೆಹಲಿಯ 'ರಾಷ್ಟ್ರೀಯ ಆಧುನಿಕ ಚಿತ್ರಕಲಾ ಪ್ರದರ್ಶನ ಶಾಲೆ'ಯಲ್ಲಿ ಸುಮಾರು 100 ಚಿತ್ರಗಳನ್ನು ಪ್ರದರ್ಶಿಸಲಾಗಿದೆ. ಈಕೆಯ ವರ್ಣಚಿತ್ರಗಳಿಗೆಂದೇ ವಿಶೇಷ ಸ್ಥಳವನ್ನು ಕೊಡುವ ಮೂಲಕ ಆಕೆಯ ಚಿತ್ರಗಳನ್ನು ವೀಕ್ಷಿಸುವ ಸೌಭಾಗ್ಯವನ್ನು ಚಿತ್ರಪ್ರೇಮಿಗಳಿಗೆ ಒದಗಿಸ ಲಾಗಿದೆ. ಆಕೆಯ ಭೌತಿಕ ಬಾಳು ಮುಗಿದರೂ, ತಮ್ಮ ವರ್ಣಚಿತ್ರಗಳ ಪ್ರತಿಭಾ ದೀಪ್ತಿಯಿಂದ ಆಕೆ ಮುಂಬರುವ ಯುವ ಕಲಾವಿದರಿಗೆ ದಾರಿ ತೋರುತ್ತಿದ್ದಾರೆ ಎಂದರೆ ಉತ್ಪ್ರೇಕ್ಷೆಯ ಮಾತಲ್ಲ. ●

—ಗೀತಾ ಜಿ. ಎಸ್.

---

## ಹದಿ ಬದೆಯ ಹೊನ್ನವ್ವನ ನೆನಪು

ಹದಿಬದೆಯ ಹೊನ್ನವ್ವ ನೀ ಎಲ್ಲಿದ್ದಿಯವ್ವ
ನಿನ್ನಕ್ಕ ತಂಗಿಯರ ಗೋಳ ನೋಡವ್ವ
ನೀ ನುಡಿದ ನುಡಿಮುತ್ತು ಎಲ್ಲೋಯಿತವ್ವ
ಹರೆಯ ತಂದ ಹಾವಳಿಯ ನೀ ನೋಡವ್ವ ॥ಹದಿಬದೆಯ॥

ಹಸಿಗೂಸಿಗೆ ತುಂಬಿತ್ತು ಹದಿನಾರರ ಹರೆಯ
ಹೆತ್ತೊಡಲಿಗೆ ಬಂದಿತ್ತು ಚಿಂತೆಯ ಕಲೆಯು
ವರನೊಬ್ಬ ದೊರಕಿದ್ದ ವರಹಗಳ ಮೇಲೆ
ಸಡಗರದಿ ಸಾಗಿತ್ತು ಸೋಬನದ ಕಾರ್ಯ ॥ಹದಿಬದೆಯ॥

ನನ್ನ ಕನಸೆಲ್ಲ ನನಸಾಯಿತೆಂದು
ಬಗೆಬಗೆಯ ಹೊಂಗನಸು ಅವಳಲ್ಲಿ ಮಿಂದು
ಕೆಲಕಾಲ ನಡೆದಿತ್ತು ಅಂಬು ಇಂಬುಗಳ ನಡುವೆ
ಕನಸೆಲ್ಲ ಮಣ್ಣಾಗಿ ಕಂಗಾಲು ಅವಳು ॥ಹದಿಬದೆಯ॥

ವರಹಗಳ ದಾಹ ವರನಲ್ಲಿ ಬಂದು
ಅನುದಿನವು ಹಿಂಸೆಗೆ ಬಲಿಯಾಗಿ ದೇಹ
ಬಳಲಿ ಬೆಂಡಾಗಿ ಕಣ್ಣೀರ ಸುರಿಸಿ
ಮೊರೆಯಿಡುತಿಹಳು ಹೊನ್ನವ
ನೀ ಎಲ್ಲಿದ್ದಿಯವ್ವ ಎಂದು ॥ಹದಿಬದೆಯ॥

ವರಹಗಳ ತರುತಿನೆಂದು ತೌರಿಗೆ ತಾ ಬಂದು
ಅರುಹಿದಳು ಬಾಳಿನ ನೋವ ಅಂದು
ಹೆತ್ತೊಡಲು ನುಡಿದಿತ್ತು ಮಮಕಾರದಲ್ಲಿ
ನಿನ್ನ ಸೋಬನಕೆ ಇದ್ದುದ್ದೆಲ್ಲವ
ಮಾರಿದೆವಲ್ಲವ್ವ ಎಂದು ॥ಹದಿಬದೆಯ॥

ವರಹವಿಲ್ಲದೆ ವರನ ಮನೆಗೆ ಬರಿಗೈಲಿ ಬಂದು
ನಾ ಗಾಣದ ಎತ್ತಾಗಿ ದುಡಿತೀನಿ ಎಂದು
ಹಿಂಸಿಸಬೇಡಿ ನೀವೆಲ್ಲ ಎಂದೊಂದು
ವರನ ಪ್ರೀತಿ ಮಾಯವಾಯಿತಲ್ಲವ್ವ

ಚಿಂತೆಯ ಚಿತೆಯಾಗಿ, ಬಳಲಿ ಬೆಂಡಾದ ದೇಹ
ಮುಂಜಾವ ಮಬ್ಬಿನಲಿ ಹತ್ತಿ ಉರಿಯಿತಲ್ಲವ್ವ
ಬೆಂಕಿ, ಬಾಳಬೇಕಿದ್ದ ಹೆಣ್ಣು ಬಲಿಯಾದಳವ್ವ
ಹದಿಬದೆಯ ಹೊನ್ನವ್ವ ನೀ ಎಲ್ಲಿದ್ದಿಯವ್ವ ? ●

—ಶ್ರೀಮತಿ ಸರಸ್ವತಿ ಸುಬ್ರಮಣ್ಯ

# ಸಮಕಾಲೀನ ಭಾರತೀಯ ಸಂದರ್ಭ ಮತ್ತು ಗ್ರಾಮೀಣ ಮಹಿಳೆ

ಸಮಕಾಲೀನ ಭಾರತೀಯ ಸಂದರ್ಭದಲ್ಲಿ ಮಹಿಳೆಯ ಸ್ಥಿತಿಗತಿಗಳನ್ನು ಕುರಿತು ಯೋಚಿಸುವಾಗಲೂ ನೂರಕ್ಕೆ 90ರಷ್ಟು ಗ್ರಾಮಗಳಲ್ಲಿ ವಾಸಿಸುವ ಮುಕ್ಕಾಲು ಪಾಲು ಮಹಿಳೆಯರ ಬಗೆಗೆ ನಮ್ಮ ಗಮನ ಹರಿಯುವುದಿಲ್ಲ. ಇದು ನಮ್ಮ ದೇಶದ ದುರದೃಷ್ಟಕರ ಸಂಗತಿ. ಇದು ಭಾರತೀಯ ಸಮಗ್ರತೆಯ ದೃಷ್ಟಿ ಇಟ್ಟುಕೊಳ್ಳಬೇಕಾದವರು ನಿರ್ಲಕ್ಷಿಸಬೇಕಾದ ವಿಷಯವಲ್ಲ. ಶಿಕ್ಷಣ, ಪ್ರಚಾರ ಹಾಗೂ ವೈಜ್ಞಾನಿಕ ಪ್ರಗತಿಗಳಿಂದಾಗಿ ನಗರವಾಸಿ ಮಹಿಳೆಯರ ಜೀವನ ಕೆಲಮಟ್ಟಿಗಾದರೂ ಸುಧಾರಿಸಿದೆ. ಈ ಸೌಲಭ್ಯಗಳಿಂದ ವಂಚಿತರಾದ ಗ್ರಾಮೀಣ ಮಹಿಳೆಯರ ಸ್ಥಿತಿ ಶತಶತಮಾನಗಳಿಂದ ಚಿಂತಾಜನಕ ಸ್ಥಿತಿಯಲ್ಲಿ ಉಳಿದುಬಿಟ್ಟಿದೆ. ಈ ಕಿರುಪ್ರಬಂಧದ ವ್ಯಾಪ್ತಿಯಲ್ಲಿ ಗ್ರಾಮೀಣ ಮಹಿಳೆಯರ ಪ್ರಸ್ತುತ ಸ್ಥಿತಿ-ಗತಿ ಹಾಗೂ ಈ ಅಶಿಕ್ಷಿತ ವರ್ಗಕ್ಕಾಗಿ ನೀಡಬೇಕಾದ ಸವಲತ್ತುಗಳನ್ನು, ಗ್ರಾಮೀಣ ಮಹಿಳೆಯರಲ್ಲಿ ಉಂಟುಮಾಡಬೇಕಾದ ವಿಚಾರ ಕ್ರಾಂತಿಯನ್ನು ಕುರಿತು ಸ್ಥೂಲವಾಗಿ ಕೆಲ ಅಂಶಗಳನ್ನು ಉಲ್ಲೇಖಿಸಲು ಮಾತ್ರ ಸಾಧ್ಯವಾಗುತ್ತದೆ.

ಸ್ವಾತಂತ್ರ್ಯಾನಂತರ ಹಾಗೂ ವಿಶೇಷವಾಗಿ ಕಳೆದ ಎರಡು ದಶಕಗಳಲ್ಲಿ ಗ್ರಾಮೀಣ ಮಹಿಳೆಯರ ಸ್ಥಿತಿ ಮೊದಲಿನಂತಿಲ್ಲ. ಹಳ್ಳಿ ಹಳ್ಳಿಗಳನ್ನು ಜೋಡಿಸುವ ರಸ್ತೆಗಳು, ವಾಹನ ಸಂಚಾರ, ವಿದ್ಯುದ್ದೀಪಗಳು, ನೀರಿನ ವ್ಯವಸ್ಥೆ ಅಲ್ಲಲ್ಲಿ ಪ್ರಾಥಮಿಕ ಶಾಲಾ ಶಿಕ್ಷಣ ವ್ಯವಸ್ಥೆ, ಗ್ರಾಮ ಪಂಚಾಯಿತಿ ಪದ್ಧತಿ, ವ್ಯವಸಾಯ, ಹೈನುಗಾರಿಕೆ ಇತ್ಯಾದಿ ಗ್ರಾಮೀಣ ಉದ್ಯೋಗಗಳಲ್ಲಿ ಆಧುನಿಕ ಪ್ರಯೋಗಗಳು, ಗ್ರಾಮೀಣ ಬ್ಯಾಂಕುಗಳಿಂದ ಗ್ರಾಮಸ್ಥರಿಗೆ ಸಾಲ ಸೌಲಭ್ಯ, ಬಯೊಗ್ಯಾಸ ಉಪಯೋಗ, ಅಂಚೆ-ಸೇವೆ, ಟಿ.ವಿ., ರೇಡಿಯೋ ಮಾಧ್ಯಮಗಳ ಮೂಲಕ ಶಿಕ್ಷಣ ಹಾಗೂ ಮನರಂಜನೆ — ಈ ಎಲ್ಲ ಸೌಲಭ್ಯಗಳಿದ್ದರೂ ಗ್ರಾಮಸ್ಥಿತ ಮಹಿಳೆಯರ ಮೂಲಭೂತ ಸ್ಥಿತಿ 'ಯಾವ ರಾಜ ಬಂದರೇನು ರಾಗಿ ಬೀಸುವುದು ತಪ್ಪಲಿಲ್ಲ' ಎಂಬಂತೆ ಆಗಿದೆ. ಇಂದಿಗೂ ಗ್ರಾಮೀಣ ಮಹಿಳೆಯರು ನಿರಕ್ಷರ ಕುಕ್ಷಿಗಳಾಗಿದ್ದಾರೆ. ಹೆಬ್ಬೆಟ್ಟಿನ ಗುರುತೇ ಅವರಿಗೆ ಗತಿ. ಮಹಿಳೆಯರನ್ನು ಪುರುಷವರ್ಗ ಎಂದಿನಿಂದಲೂ ಹೀನ ದೃಷ್ಟಿಯಿಂದ ನೋಡುತ್ತಿದೆ. ಶಿಕ್ಷಣವಿಲ್ಲದ, ಆರ್ಥಿಕ ಸ್ವಾತಂತ್ರ್ಯವಿಲ್ಲದ, ಸಂಪ್ರದಾಯ ಶರಣ ಗ್ರಾಮೀಣ ಮಹಿಳೆಯರ ಸ್ಥಿತಿ ತೀರಾ ಕೆಳಹಂತದಲ್ಲಿದೆ. ಯಾವ ಆಧುನಿಕತೆಯ ಗಾಳಿಯೂ ಅವಳನ್ನು ತಟ್ಟದೆ, ತಟ್ಟಿದರೂ ತಟ್ಟದಂಥ ಅಸಹಾಯಕ ಸ್ಥಿತಿಯಲ್ಲಿ ಅವಳಿದ್ದಾಳೆ. ಬಡತನ, ನಿರಕ್ಷರತೆ, ಸಂಪ್ರದಾಯ ಶರಣತೆ, ನಿರಾಸೆ, ಶಾಸನಾತ್ಮಕ ಹಕ್ಕು ಭಾಧ್ಯತೆಗಳ ಬಗ್ಗೆ ಸಂಪೂರ್ಣ ಅಜ್ಞಾನ, ಪುರುಷವರ್ಗದಿಂದಾಗುವ ದೈಹಿಕ, ಮಾನಸಿಕ ಶೋಷಣೆ, ಕ್ರೌರ್ಯ ಇಂಥ ಅನೇಕ ಕಾರಣಗಳಿಂದ ಗ್ರಾಮೀಣ ಜನ ಸಮುದಾಯ ನರಕದಲ್ಲಿ ತೊಳಲುತ್ತಿದೆ. ಹೆಣ್ಣು ಮಗುವಿರಲಿ, ಪ್ರೌಢ ಮಹಿಳೆ ಇರಲಿ, ವೃದ್ಧೆ ಇರಲಿ ದಿನದ 24 ಗಂಟೆ ಗಾಣದೆತ್ತಿನಂತೆ ದುಡಿಯುವುದು, ಗುಲಾಮರಂತೆ ಪುರುಷರ ವಿಚಾರಗಳನ್ನು ಮರುವಿಚಾರವಿಲ್ಲದೆ ಪಾಲಿಸುವುದು, ಹೆಣ್ಣಿನ ಜನ್ಮವೇ ಹೀಗೆಂದು ಗ್ರಹಿಸಿ ಸುಂದರ ಬಾಳನ್ನು ಶಿಲುಬೆಯಂತೆ ಹೊತ್ತುಕೊಂಡು ನಡೆದ ಗ್ರಾಮೀಣ ಮಹಿಳೆಯರಿಗಾಗಿ ಸ್ಪಂದಿಸದ, ಸ್ಪಂದಿಸಿದರೂ ಕ್ರಿಯಾಶೀಲರಾಗದ ಜನರಿರುವುದು ನಮ್ಮ ದೇಶದ ದುರ್ದೈವ. ಪರದೇಶಗಳಿಂದ ಅನೇಕ ಸುಶಿಕ್ಷಿತ ಪುರುಷರು, ಮಹಿಳೆಯರು ನಮ್ಮ ಗ್ರಾಮೀಣ ಮಹಿಳೆಯರ ಉದ್ಧಾರಕ್ಕೆ ಜೀವನ ಮುಡಿಪಾಗಿಸುತ್ತಿರುವಾಗ, ಆರ್ಥಿಕವಾಗಿ ಸುಸ್ಥಿತ ಸುಶಿಕ್ಷಿತ ವರ್ಗಗಳ ಪುರುಷರು, ಮಹಿಳೆಯರು ಕಣ್ಣು ಕಾಣದ ಗಾವಿಲರಾಗಿ ಸ್ವಾರ್ಥಕ್ಕಾಗಿಯೇ ಹೋರಾಟ ನಡೆಸಿರುವದು ನಾಚಿಕೆಗೇಡಿನ ಸಂಗತಿ.

ಗ್ರಾಮೀಣ ಮಹಿಳೆಯ ದುಡಿತಕ್ಕೆ ಬೆಲೆಯೇ ಇಲ್ಲ. ಅಧಿಕ ಸಂಖ್ಯೆಯಲ್ಲಿ ಕೂಲಿನಾಲಿ ಮಾಡುವ ಗ್ರಾಮೀಣ ಮಹಿಳೆಯರಿಗೆ ದೊರಕುವ ಸಂಬಳದಲ್ಲಿ ತಾರತಮ್ಯವಿದೆ. ಗ್ರಾಮೀಣ ಬಾಲಕಿಯರಿಗೆ ಶಿಕ್ಷಣವಿಲ್ಲ. ಅವರ ತಾಯಂದಿರು ಹಡೆದುಕೊಟ್ಟ ತಂಗಿ ತಮ್ಮಂದಿರನ್ನು ಹೊತ್ತುಕೊಂಡು ಅಡ್ಡಾಡುವುದು, ಮನೆಯ ಕಸ ಮುಸುರೆ

ಮಾಡುವದು, ದನ ಕಾಯುವುದು ಇತ್ಯಾದಿ ಕೆಲಸಗಳಲ್ಲಿ ಬಾಲ್ಯದ ಮಧುರ ಅನುಭವಗಳನ್ನು ಕಳೆದುಕೊಳ್ಳುವ ಗ್ರಾಮೀಣ ಬಾಲಕಿಯರಿಗಾಗಿ ಹಳಹಳಿಸುವ ಜನರಿಲ್ಲ. ಪೌಷ್ಟಿಕ ಆಹಾರವಿಲ್ಲದ ಬಸಿರೆಯರು, ವಿಶ್ರಾಂತಿ ಪಡೆಯಲು ಸಾಧ್ಯವಾಗದೆ, ಮನೆಯ ಕೆಲಸಗಳಿಗಾಗಿ ಗಾಣಕ್ಕೆ ಗೋಣುಕೊಡುವ ಪತ್ನಿನಂತಾಗುವ ಬಾಣಂತಿಯರು, ಮಕ್ಕಳ ಆರೋಗ್ಯ ಬೆಳವಣಿಗೆಗಳ ಜ್ಞಾನವಿಲ್ಲದ ತಾಯಂದಿರ ಅಲಕ್ಷಗಳಿಂದ ರೋಗಗ್ರಸ್ತವಾಗುತ್ತಿರುವ ಹಸುಳೆಗಳು, ಸರಿಯಾದ ವೈದ್ಯಕೀಯ ಸಲಹೆ ಸಿಗದೆ ಮರಣ ಅಪ್ಪುವ ಅಬಾಲವೃದ್ಧರು, ದುಡಿಯಲಾಗದ, ದುಡಿ ದುಡಿದು ಹಣ್ಣಾಗಿ ಘಣ್ಣಾಗಿ ಮೂಲೆ ಗುಂಪಾದ ಗ್ರಾಮೀಣ ವೃದ್ಧೆಯರು. ಗ್ರಾಮಗಳಲ್ಲಿ ಯಾವ ಮಹಿಳೆಯ ಮುಖದಲ್ಲಿ ನಗೆ ಇದೆ ಎಂದು ಹುಡುಕಬೇಕು. ಸ್ವತಃ ಅಜ್ಞಾನ ಅನಾರೋಗ್ಯಗಳಿಂದ ಬಳಲುವ ಮಹಿಳೆ ಅದಾವ ಸ್ವಸ್ಥ ಕುಟುಂಬ ಕಟ್ಟಬಲ್ಲಳು ? ಇಂಥ ಅಸ್ವಸ್ಥ ವಾತಾವರಣದ ಗ್ರಾಮಗಳ ಉದ್ಧಾರ ಹೇಗಾದೀತು ? ಒಬ್ಬ ಸುಸಂಸ್ಕೃತ ಸುಶಿಕ್ಷಿತ ಮಹಿಳೆ ಒಂದು ಸುಂದರ ಕುಟುಂಬ ಕಟ್ಟಬಲ್ಲಳು. 'ತೊಟ್ಟಿಲು ತೂಗುವ ಕೈ ಜಗತ್ತನ್ನೇ ತೂಗುತ್ತಿದೆ' ಎಂಬುದರಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲ. ಹನಿ ಹನಿ ಕೂಡಿದರೆ ಹಳ್ಳ, ತೆನೆ ತೆನೆ ಕೂಡಿದರೆ ರಾಶಿ, ಮನೆ ಮನೆಯಲ್ಲಿ ಸುಶಿಕ್ಷಿತ ಮಹಿಳೆಯರಿದ್ದರೆ ದೇಶದ ಸರ್ವಾಂಗೀಣ ಪ್ರಗತಿ ಎಂಬ ಒಂದು ಸರಳ ವಿಚಾರ ರಾಷ್ಟ್ರ ಕಟ್ಟುವ ನಾಯಕರಿಗೆ, ರಾಜಕಾರಣಿಗಳಿಗೆ ಹಾಗೂ ಹಿತಚಿಂತಕರಿಗೆ ಏಕೆ ಬರುವುದಿಲ್ಲ ? ಗ್ರಾಮ ನಿವಾಸಿಗಳಾದ ನಮ್ಮ ಅಕ್ಕ - ತಂಗಿಯರು ನರಕಯಾತನೆಯಲ್ಲಿ ತೊಳಲುವಾಗ, ನಗರಸ್ಥಿತ ಸುಶಿಕ್ಷಿತ ಮಹಿಯರಾದ ನಾವೆಲ್ಲ ನಿಷ್ಕ್ರಿಯರಾಗಿರುವದು ಎಂಥ ಅಮಾನವೀಯ ನಿಲುವು !

ಇನ್ನಾದರೂ ಗ್ರಾಮೀಣ ಮಹಿಳೆಯರ ಯೋಗಕ್ಷೇಮಕ್ಕಾಗಿ ಸರಕಾರ, ಸಾರ್ವಜನಿಕರು, ಸಮಾಜ ಸೇವಕರು, ವಿಶೇಷವಾಗಿ ಸುಶಿಕ್ಷಿತ ಮಹಿಳೆಯರು ಗಮನ ಹರಿಸಿ ಅವರ ಸೇವೆಗಾಗಿ ಕಂಕಣ ಕಟ್ಟಬೇಕಿದೆ. ಮಹಿಳಾ ದಿನ, ಮಹಿಳಾ ವರ್ಷ, ಮಹಿಳಾ ದಶಕವೆಂಬ ಆಚರಣೆಯ ತೋರಿಕೆಯಲ್ಲಿ ಪೋಲಾಗುವ ಹಣದ ಅಪವ್ಯಯ ನಿಲ್ಲಿಸಿ ರಚನಾತ್ಮಕ ಯೋಜನೆಯ ಅನುಷ್ಠಾನದತ್ತ ಧಾವಿಸಬೇಕು. ಶತ ಶತಮಾನಗಳಿಂದ ಅಜ್ಞಾನ, ಮೂಢನಂಬಿಕೆ, ಶೋಷಣೆಗೆ ಒಳಗಾದ ಗ್ರಾಮೀಣ ಮಹಿಳೆಯ ಮನ ಮುಕುರವು ಯಾವ ಹೊಸ ವಿಚಾರವನ್ನೂ ಪ್ರತಿಬಿಂಬಿಸಿಕೊಳ್ಳಲಾಗದಷ್ಟು ಮಂಕಾಗಿ ಹೋಗಿದೆ. ಆದ್ದರಿಂದ ಅವರ ಮನದಲ್ಲಿ ನೆಲೆಗಟ್ಟಾದ ತಪ್ಪು ವಿಚಾರಗಳನ್ನು ಹೊಡೆದು ಹಾಕಿ ಹೊಸ ವಿಚಾರಗಳ ಬೀಜಗಳನ್ನು ಬಿತ್ತಬೇಕು. ಅದಕ್ಕಾಗಿ ಮೊದಲು ಅಕ್ಷರಜ್ಞಾನ ಹಾಗೂ ಶಿಕ್ಷಣದ ಅಗತ್ಯವಿದೆ. ಸರಕಾರ ಕೈಗೊಂಡ ಪ್ರೌಢಶಿಕ್ಷಣ ಕಾರ್ಯಕ್ರಮಗಳಲ್ಲಿ ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ಭಾಗ ವಹಿಸುವಂತೆ ಒತ್ತಾಯಿಸಬೇಕು. ನಮ್ಮ ಉಚ್ಚ ಶಿಕ್ಷಣದ ಅಭ್ಯಾಸ ಕ್ರಮದಲ್ಲಿ ಗ್ರಾಮಸೇವೆಯನ್ನೂ ಸೇರಿಸಬೇಕು. ನಗರದ ಸಾಂಸ್ಕೃತಿಕ ಸಂಘಗಳು ನಿಯಮಿತವಾಗಿ ಗ್ರಾಮಗಳಲ್ಲಿ ಅಕ್ಷರಜ್ಞಾನ, ಆರೋಗ್ಯ, ಕುಟುಂಬ ಯೋಜನೆ, ಮಕ್ಕಳ ಪಾಲನೆ - ಪೋಷಣೆ, ಆರ್ಥಿಕ ಸ್ವಾವಲಂಬನೆ, ಚಿಕ್ಕ ಉದ್ದಿಮೆಗಳನ್ನು ಕುರಿತು ಮಾಹಿತಿ ನೀಡುವ ಕಾರ್ಯಕ್ರಮ ಇಟ್ಟುಕೊಳ್ಳಬೇಕು. ನಗರ ಬಡಾವಣೆಗಳಲ್ಲಿ ನಾಯಿ ಕೊಡೆಗಳಂತೆ ಏಳುತ್ತಿರುವ ಮಹಿಳಾ ಮಂಡಳಗಳು ಇಂಥ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರೆ ಎಷ್ಟು ಚೆನ್ನು ! ರೋಗಿಗಳಿಂದ ಹಣವನ್ನು ದೋಚುವುದರಲ್ಲೇ ಸಂತೋಷ ಪಡುವ ನಮ್ಮ ವೈದ್ಯರು ವಾರದ ಒಂದು ದಿನ ಗ್ರಾಮಗಳಲ್ಲಿ ಉಚಿತ ತಪಾಸಣೆ, ಸಲಹೆ ಸೂಚನೆಗಳನ್ನು ಕೊಟ್ಟು ಗ್ರಾಮ ಆರೋಗ್ಯಕ್ಕಾಗಿ ಏಕೆ ಸಹಾಯ ಹಸ್ತ ನೀಡಬಾರದು ? ಶಿಕ್ಷಣ, ಆರೋಗ್ಯದ ಪಾಠಗಳೊಂದಿಗೆ ಗ್ರಾಮೀಣ ಮಹಿಳೆಯರನ್ನು ಸ್ವಾವಲಂಬಿಗಳನ್ನಾಗಿ ಮಾಡಲು ಗುಡಿಕೈಗಾರಿಕೆ, ಹೊಲಿಗೆ, ಕಸೂತಿ, ನೇಕಾರಿಕೆ, ಕೋಳಿ ಸಾಕಾಣಿಕೆ, ತೋಟಗಾರಿಕೆ, ಜೇನು ಶೇಖರಣೆ, ಸಸಿಗಳ ಉತ್ಪಾದನೆ, ಗೃಹೋಪಯೋಗಿ ಆಹಾರ ವಸ್ತುಗಳ ತಯಾರಿಕೆ ಕುರಿತು ತರಬೇತಿ ಶಿಬಿರಗಳನ್ನು ಕಾರ್ಯಗತಗೊಳಿಸಬೇಕು. ಅಂಥ ಉದ್ಯಮಗಳಲ್ಲಿ ಮಹಿಳೆಯರು ತೊಡಗುವಂತೆ ಸರಕಾರದಿಂದ ಸಹಾಯಧನ ಕೊಡಿಸಲು ಗ್ರಾಮೀಣ ಬ್ಯಾಂಕು ಅಧಿಕಾರಿಗಳು ಆಫೀಸು ಕೋಣೆ ಬಿಟ್ಟು ಮನೆ ಬಾಗಿಲಿಗೆ ಬರಬೇಕಾದ ಅವಶ್ಯಕತೆ ಅರಿತುಕೊಳ್ಳಬೇಕು.

ಅಲ್ಲದೇ ಸಾಮಾಜಿಕ ಅನಿಷ್ಟಗಳಾದ ಬಾಲ್ಯ-ವಿವಾಹ, ವರದಕ್ಷಿಣೆ, ದೇವದಾಸಿ, ಬತ್ತಲೆಸೇವೆ, ವಿಷಮ-ವಿವಾಹ, ವೇಶ್ಯಾವೃತ್ತಿ ಇತ್ಯಾದಿ ಸಮಸ್ಯೆಗಳನ್ನು ಕುರಿತು ಭಾಷಣ, ಚರ್ಚೆ, ಚಲನಚಿತ್ರ ಪ್ರದರ್ಶನಗಳ ಮೂಲಕ ಹೊಸ

ವಿಚಾರಗಳಲ್ಲಿ ತೊಡಗುವಂತೆ ಮಾಡಬೇಕಿದೆ. ಗ್ರಾಮೀಣ ಮಹಿಳೆಯರ ಮೇಲಿನ ಶೋಷಣೆ ತಪ್ಪಿಸಲು, ನಮ್ಮ ಮಹಿಳೆಯರಿಗೆ ಕಾಯಿದೆ-ಕಾನೂನು, ಆಸ್ತಿಯ ಹಕ್ಕು ಇತ್ಯಾದಿಗಳನ್ನು ಮನವರಿಕೆ ಮಾಡಿಕೊಡಲು ನಗರದ ಮಹಿಳಾ ನ್ಯಾಯವಾದಿಗಳು ನಿಯಮಿತವಾಗಿ ಗ್ರಾಮಗಳಿಗೆ ಭೇಟಿನೀಡುವ ಜ್ಞಾನ ದಾಸೋಹಗಳನ್ನೇರ್ಪಡಿಸಬೇಕು. ಗ್ರಾಮೀಣ ಮಹಿಳೆಯರಿಗೆ ತಮ್ಮ ಚರ್ಚೆಗಾಗಿ ಮಹಿಳಾ ಮಂಡಳಗಳನ್ನು ಕಟ್ಟಲು ಸರಕಾರ ಧನ ಸಹಾಯ ಮಾಡಬೇಕು. ಗ್ರಾಮಗಳಲ್ಲಿ ಗ್ರಾಮ ಪಂಚಾಯಿತಿ ಇರುವಂತೆ ಇಂಥ ಗ್ರಾಮೀಣ ಮಹಿಳಾ ಮಂಡಳಗಳಲ್ಲಿ ಮಹಿಳೆಯರ ಮೇಲಾಗುವ ದೌರ್ಜನ್ಯ ಕುರಿತು ಸಲಹೆ, ಪರಿಹಾರ ನೀಡುವ ನಗರದ ಸುಶಿಕ್ಷಿತ ಮಹಿಳೆಯರು, ನ್ಯಾಯವಾದಿಗಳಿಂದೊಡಗೂಡುವ ಒಂದು ಕಾರ್ಯಕಾರಿ ಮಂಡಳಿ ನೇಮಕಗೊಳ್ಳಬೇಕು. ಇಂಥ ಕೆಲವು ಮೂಲಭೂತ, ರಚನಾತ್ಮಕ ಕಾರ್ಯಗಳನ್ನು ಕೈಕೊಂಡು ಗ್ರಾಮಸೇವೆಯಲ್ಲಿ ತೊಡಗಲು ಸರಕಾರ, ಸಾರ್ವಜನಿಕರು ಮತ್ತು ವಿಶೇಷವಾಗಿ ನಗರಸ್ಥ ಸುಶಿಕ್ಷಿತ ಮಹಿಳೆಯರು ಮುಂದೆ ಬರುವ ಅಗತ್ಯ ಎಂದಿಗಿಂತ ಇಂದು ಹೆಚ್ಚಾಗಿದೆ. ●

**—ಮಾಲತಿ ಪಟ್ಟಣಶೆಟ್ಟಿ**

---

ನಾನು ರೈತ ಸಂಘದಲ್ಲಿ ತೊಡಗಿಸಿಕೊಂಡಾಗ ಮೊದಮೊದಲು ನಮ್ಮ ಹೆಂಗಸರು ತುಂಬಾ ಟೀಕಿಸುತ್ತಿದ್ದರು. ಗಂಡ ಬಿಟ್ಟವಳಂತೆ ಓಡಾಡುತ್ತಾಳೆ ಅನ್ನುತ್ತಿದ್ದರು. ಕಾರ್ಯಕ್ರಮಗಳಿಗೆ ಹೋಗುವಾಗ ಜತೆಗೆ ಕರದರೆ "ಇವಳೇ ಹೊತ್ಕೊಂಡು ಬರೋದು ಸಾಕು, ನಮಗೇನೂ ಬೇಡ, ನಾವ್ಯಾಕೆ ಮನೆ–ಮಠ ಹಾಳು ಮಾಡಿಕೊಳ್ಳಬೇಕು" ಅನ್ನುತ್ತಿದ್ದರು. ನೆಂಟರಿಷ್ಟರಲ್ಲೂ ತುಂಬಾನೇ ಅಗೌರವ ಇತ್ತು. 'ಮನೆ–ಮಠ, ಹೊಲ-ಗದ್ದೆ ಅನ್ನೋ ಪರಿವೆ ಇಲ್ಲದೆ ಎಲ್ಲಾ ಬಿಟ್ಟವಳ ಹಾಗೆ ಓಡಾಡುತ್ತಾಳೆ ಎಲ್ಲಾದರೂ ಸಮಾರಂಭಗಳಿಗೆ ಬಂದರೆ ಒಡವೆ ಹಾಕಿಕೊಳ್ಳುವುದಿಲ್ಲ, ಒಳ್ಳೆ ಸೀರೆ ಉಡುವುದಿಲ್ಲ. ದೇಶ ಉದ್ಧಾರ ಮಾಡುತ್ತಾಳಂತೆ, ಮರ್ಯಾದೆಯಾಗಿ ಸಂಸಾರ ಮಾಡಿಕೊಂಡು ಇರೋದಕ್ಕೆ ಆಗುವುದಿಲ್ಲ ಮನೆಯಲ್ಲಿ" ಹೀಗೆಲ್ಲಾ ಅನ್ನುತ್ತಿದ್ದರು. ಈ ತರ ಪ್ರತಿಕ್ರಿಯೆ ದಂಡಿಯಾಗಿ ಬಂದವು. ಇದನ್ನು ಕೇಳುತ್ತಾ, ನನಗೇನೂ ನೋವು-ನಿರಾಸೆ ಆಗಲಿಲ್ಲ. ಯಾಕೆಂದರೆ ನಮ್ಮ ಕುಟುಂಬಗಳಲ್ಲಿ ಹೆಣ್ಣುಮಕ್ಕಳು ಸೀಮಿತರಾಗಿ ಬೆಳೆದಿರುತ್ತಾರೆ. ವಿಶಾಲವಾಗಿ ನೋಡೋ ವ್ಯವಸ್ಥೆ ಅಲ್ಲ ನೋಡಿ ನಮ್ಮದು! ನನ್ನ ಧ್ಯೇಯ-ಧೋರಣೆಗಳು ಅರ್ಥ ಆಗಿದ್ದರೆ ಅವರು ಹಾಗನ್ನುತ್ತಿರಲಿಲ್ಲ. ಹೆಣ್ಣು ಅಂದ್ರೆ ಮನೆ-ದುಡಿಮೆ, ಗಂಡನ ಅಡಿಯಾಳಾಗಿರೋದು ಇಷ್ಟಕ್ಕೆ ಎಂದು ಅಂದುಕೊಂಡಿರುತ್ತಾರೆ.

(ಶ್ರೀಮತಿ ಅನಸೂಯಮ್ಮ, 'ಸಮಬ್ಯಾ ಸಂವಾದ'ಕ್ಕೆ ನೀಡಿದ ಸಂದರ್ಶದಲ್ಲಿ



# ಪ್ರಕೃತಿ, ಪುರುಷ, ಹೆಣ್ಣು ಮತ್ತು ಅಸಮಾನತೆ : ಕೆಲವು ಪರ್ಯಾಯ ಪ್ರಶ್ನೆಗಳು

'ಸ್ತ್ರೀವಾದ ಮತ್ತು ಇಕೋ ಸ್ತ್ರೀವಾದ'ವನ್ನು (ಮಾನಸ ಜುಲೈ, 1992) ಓದುತ್ತಿದ್ದಂತೆ ಹುಟ್ಟಿಕೊಂಡ ಕೆಲವು ಆಲೋಚನೆಗಳಿಗೆ ರೂಪ ಕೊಡಲು ಇಲ್ಲಿ ಪ್ರಯತ್ನಿಸಿದ್ದೇನೆ. ಸ್ತ್ರೀಯನ್ನು ಪ್ರಕೃತಿಯೊಡನೆ ಮತ್ತು ಪುರುಷನನ್ನು ಸಂಸ್ಕೃತಿಯೊಡನೆ ಸಮೀಕರಿಸುವುದು ಪಾಶ್ಚಾತ್ಯ ದೇಶಗಳಿಗೆ ಸೀಮಿತವಾಗಿರದೆ, ಇತರ ಸಮಾಜಗಳಲ್ಲೂ ಪ್ರಚಲಿತವಾಗಿದೆ ಎನ್ನುವುದಕ್ಕೆ ಭಾರತವೇ ಸಾಕ್ಷಿ. ಆದರೂ, ವಿಭಿನ್ನ ಸಮಾಜಗಳಿಗೆ ಅನ್ವಯವಾಗುವ ಸಮಾನವಾದ ಅರ್ಥವನ್ನು ಇದು ಪಡೆದುಕೊಂಡಿದೆ ಎಂದು ಭಾವಿಸಿದರೆ ತಪ್ಪಾಗುತ್ತದೆ. ನಮ್ಮ, ಅಂದರೆ ಭಾರತೀಯ ಸಂದರ್ಭವನ್ನೇ ತೆಗೆದುಕೊಂಡಾಗ, ಈ ದ್ವಿತ್ವಾತ್ಮಕ ಕಲ್ಪನೆಯು ಪಡೆದಿರುವ ವಿಶಿಷ್ಟ ಆಯಾಮಗಳನ್ನು ಗುರುತಿಸಲು ಸಾಧ್ಯ. ಆದ್ದರಿಂದ, ಬಹುಶಃ ನಾವು ಕೇಳಬೇಕಾಗುವ ಪ್ರಶ್ನೆಗಳ ಮತ್ತು ಒದಗಿಸಬಹುದಾದ ಉತ್ತರಗಳ ಸ್ವರೂಪವೇ ಭಿನ್ನವಾಗಬೇಕು ಎನ್ನುವುದು ನನ್ನ ಭಾವನೆ. ಇಂಥ ಪರ್ಯಾಯ ವ್ಯಾಖ್ಯಾನಕ್ಕೆ ಹಿನ್ನೆಲೆಯಾಗಿ ಚರ್ಚಿಸಬಹುದಾದ ಕೆಲವು ವಿಷಯಗಳನ್ನು ಮಾತ್ರ ಇಲ್ಲಿ ಪ್ರಸ್ತಾಪಿಸುತ್ತೇನೆ.

ಮಹಿಳಾ ಚಳವಳಿಯ ಬಗ್ಗೆ ನೇರವಾಗಿ ಮಾತನಾಡದೆ, ಅದು ಸೃಷ್ಟಿಸುತ್ತಿರುವ ವ್ಯಾಖ್ಯಾನಗಳನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ಮಹಿಳೆಯರನ್ನು ಕುರಿತಾದ ಅಧ್ಯಯನಗಳ ರೂಪರೇಷಗಳನ್ನು ವೀಕ್ಷಿಸಿದಾಗ ಹಲವು ಅಂಶಗಳು ಸ್ಪಷ್ಟವಾಗುತ್ತವೆ. ಅವುಗಳಲ್ಲಿ ಒಂದೆರಡನ್ನು ಇಲ್ಲಿ ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ನಮ್ಮ ವ್ಯಾಖ್ಯಾನ ಮಾದರಿಗಳನ್ನು ಈ ರೀತಿ ವಿಮರ್ಶೆಗೆ ಒಳಪಡಿಸುವುದರ ಮೂಲಕ ಅವುಗಳಲ್ಲಿ ಹುದುಗಿಕೊಂಡಿರುವ ಪೂರ್ವಗ್ರಹಿಕೆಗಳನ್ನು ಬೆಳಕಿಗೆ ತಂದು, ಅವುಗಳ ತಪ್ಪು-ಒಪ್ಪುಗಳನ್ನು ಪರಾಮರ್ಶಿಸಲು ಸಾಧ್ಯ.

ಮಹಿಳಾ ಪ್ರಶ್ನೆಯನ್ನು ಅರ್ಥೈಸಲು ಬಯಸುವ ಎಲ್ಲ ಪ್ರಯತ್ನಗಳೂ ಆಧುನಿಕತೆಯ ಸಂದರ್ಭವನ್ನು ಗಣನೆಗೆ ತೆಗೆದುಕೊಳ್ಳಲೇ ಬೇಕಾಗುತ್ತದೆ. ಭಾರತೀಯ ಇತಿಹಾಸದ ಬೇರೆ ಬೇರೆ ಹಂತಗಳಲ್ಲಿ ಆಧುನಿಕತೆ ಮತ್ತು ಮಹಿಳಾ ಪ್ರಶ್ನೆಯ ನಡುವಿನ ಸ್ಪಂದನ-ಪ್ರತಿಸ್ಪಂದನಗಳ ಫಲವಾಗಿ, ಮಹಿಳಾ ಪ್ರಶ್ನೆಯ ಸ್ವರೂಪವೂ ಭಿನ್ನವಾಗುತ್ತಾ ಬಂದಿದೆ. ನನಗೆ ಅತ್ಯಂತ ಮಹತ್ವದ್ದು ಅನಿಸಿದ ಇಂಥ ಎರಡು ಹಂತಗಳನ್ನು ಮಾತ್ರ ಇಲ್ಲಿ ಸ್ಥೂಲವಾಗಿ ವಿವರಿಸುತ್ತೇನೆ : ಒಂದು ರಾಷ್ಟ್ರೀಯ ಆಂದೋಲನದ ಸಂದರ್ಭ ; ಎರಡನೆಯದು ಸ್ವಾತಂತ್ರ್ಯಾನಂತರದ ಭಾರತ.

**ರಾಷ್ಟ್ರೀಯ ಆಂದೋಲನದ ಸಂದರ್ಭ**

ಭಾರತದಲ್ಲಿನ ಮಹಿಳಾ ಪ್ರಶ್ನೆಯ ಬೆಳವಣಿಗೆಯನ್ನು 19 ನೇ ಶತಮಾನದ ಉದ್ದಕ್ಕೂ ಕಾಣಬಹುದು. ಸುಧಾರಣಾ ಚಳವಳಿ ಮತ್ತು ರಾಷ್ಟ್ರೀಯ ಚಳವಳಿಗಳು ತಮ್ಮ ಪ್ರಾಬಲ್ಯವನ್ನು ಸ್ಥಾಪಿಸಿದಂತೆ, 'ಆಧುನಿಕ' ಭಾರತದಲ್ಲಿನ ಮಹಿಳೆಯ ಸ್ಥಾನದ ಬಗ್ಗೆಯೂ ಚಿಂತನೆ ನಡೆಸಿದವು. ಆ ಸನ್ನಿವೇಶದಲ್ಲಿ ಭದ್ರಿಸಲಾದ ಮೂರು ಅಂಶಗಳನ್ನು ಇಲ್ಲಿ ಉದ್ಧರಿಸಬಹುದು : 1) ಸ್ತ್ರೀತ್ವದ ಕಲ್ಪನೆ. ಹೆಣ್ಣನ್ನು ಭಾರತೀಯ ಸಂಸ್ಕೃತಿಯ ಪ್ರತೀಕವಾಗಿ ಕಾಣುವ ಮೂಲಕ, ಅವಳ 'ಸ್ತ್ರೀತ್ವ'ವನ್ನು ಈ ಸಂಸ್ಕೃತಿಯ ವಿಶಿಷ್ಟ ಆಧ್ಯಾತ್ಮಿಕ ಮೌಲ್ಯಗಳೊಡನೆ ಗುರುತಿಸಲಾಯಿತು. 2) ಇದೇ ದೃಷ್ಟಿಕೋನವು ಮಹಿಳೆಯರ ಸಾಮಾಜಿಕ ಮತ್ತು ನೈತಿಕ ಎಲ್ಲೆಗಳ ನಿರ್ಧಾರಕ ಮಾನದಂಡವಾಯಿತು. 3) ಈ ಸಮೀಕರಣವು ರಾಷ್ಟ್ರೀಯ ಚಳವಳಿಯ ಐಡಿಯಾಲಜಿಯ ಫಲ ಮಾತ್ರ ಆಗಿರದೆ, ಆಂದೋಲನಕ್ಕೆ ಆಕಾರ ಒದಗಿಸಿದ ಮೂಲಭೂತ ಕಲ್ಪನೆಗಳಲ್ಲಿ ಒಂದಾಗಿತ್ತು. ಪಾರ್ಥಾ ಚಟರ್ಜಿಯವರ ಲೇಖನ ('The Nationalist Resolution of the Women's Question', 1989)* ಸೂಚಿಸುವಂತೆ,

ಭಾರತವು ಭೌತಿಕವಾಗಿ ಪಾಶ್ಚಾತ್ಯ ಅಧೀನಕ್ಕೊಳಗಾಗಿದ್ದರೂ ಆಧ್ಯಾತ್ಮಿಕವಾಗಿ ಅಧೀನ್ಯದ ವಲಯದಾಚೆ. ಇದೆ ಎನ್ನುವುದು ಆಂದೋಲನದ ವಾದಗಳಲ್ಲಿ ಒಂದು. ಆಧ್ಯಾತ್ಮಿಕ ನೆಲೆಯ ಪ್ರತಿನಿಧಿಯಾದ ಹೆಣ್ಣನ್ನು 'ವಿಮುಕ್ತೆ' ಎಂದು ಅರ್ಥೈಸಲು ಹೆಚ್ಚು ಶ್ರಮ ಪಡಬೇಕಾಗಲಿಲ್ಲ. ಹೀಗೆ, ರಾಷ್ಟ್ರೀಯ ಮತ್ತು ಸುಧಾರಣ ಚಳವಳಿಗಳು ಮಹಿಳಾ ಪ್ರಶ್ನೆಯನ್ನು ಒಂದು ಅರ್ಥದಲ್ಲಿ 'ಅರಾಜಕೀಯ' ವಾಗಿಸಿದವು.

ಮಹಿಳಾ ಪ್ರಶ್ನೆಯ 'ಪರಿಹಾರ'ದ ಸ್ವರೂಪವನ್ನು ಇನ್ನಷ್ಟು ಹತ್ತಿರದಿಂದ ನೋಡೋಣ. ಭಾರತೀಯ ಸಂಸ್ಕೃತಿಯ ಭೌತಿಕ ಮತ್ತು ಆಧ್ಯಾತ್ಮಿಕ ಆಯಾಮಗಳ ನಡುವಿನ ವಿಂಗಡನೆಯನ್ನು ರಾಷ್ಟ್ರೀಯ ಆಂದೋಲನ ಹಾಗು ಆಲೋಚನೆಗಳ ಅಡಿಯಲ್ಲಿ ಸ್ಪಷ್ಟವಾಗಿ ಕಾಣ ಬಹುದು. ಇದು ರಾಜಕೀಯ ತಂತ್ರವೋ ಸ್ಥಾಪಿತ ನಂಬಿಕೆಯೋ ಎಂಬ ಗುಮಾನಿ ಮಹಿಳಾ ಪ್ರಶ್ನೆಯನ್ನು ಅರ್ಥೈಸುವಾಗ ಹೆಚ್ಚು ಪ್ರಸ್ತುತವಾಗುವುದಿಲ್ಲ. ಯಾಕೆಂದರೆ ಅದರ ಪರಿಣಾಮವು ಏಕರೂಪದ್ದಾಗಿದೆ. ಇದಕ್ಕನು ಗುಣವಾಗಿ : ಪಾಶ್ಚಾತ್ಯ ದಬ್ಬಾಳಿಕೆಯ ನೈಜ ಸ್ವರೂಪವು ಭೌತಿಕ ವಲಯಕ್ಕೆ ಸೀಮಿತವಾದ್ದರಿಂದ, ಸ್ವಾತಂತ್ರ್ಯ ಚಳವಳಿಯ ರಂಗವೂ ಅದೇ ಆಗಿತ್ತು. ಇದಕ್ಕೆ ವಿರುದ್ಧ ವಾಗಿ, ಭಾರತೀಯ ಸಂಸ್ಕೃತಿಯ ಮೂಲ ಸೆಲೆಯಾದ ಆಧ್ಯಾತ್ಮಿಕತೆಯು ಪಾಶ್ಚಾತ್ಯದಕ್ಕಿಂತ ಉತ್ತಮವಾಗಿದ್ದು, ಅದರ ದಬಾವಣೆಯ ವಲಯದಾಚೆ ನಿಲ್ಲುವಂಥದ್ದು. ರಾಜಕೀಯ ಕ್ಷೇತ್ರದಲ್ಲಿ ದುಡಿಸಿಕೊಳ್ಳಲಾದ ಭೌತಿಕತೆ ಮತ್ತು ಆಧ್ಯಾತ್ಮಿಕತೆಗಳ ನಡುವಿನ ಈ ವೈರುಧ್ಯವು ಸಾಮಾಜಿಕ-ಬದುಕಿನ ಉದ್ದಗಲಕ್ಕೂ ಹರಡುವ ಪ್ರಕ್ರಿಯೆ ನಿಜಕ್ಕೂ ಆಶ್ಚರ್ಯಕಾರಿ. ಅದೇ ವೈರುಧ್ಯದ ಪ್ರತಿಬಿಂಬ ಗಳಂತೆ ಹಲವಾರು ಇತರ ಕಲ್ಪನೆಗಳು ಚಲಾವಣೆಗೆ ಬರುವುದನ್ನು ಈ ಐತಿಹಾಸಿಕ ಸನ್ನಿವೇಶದಲ್ಲೇ ಗುರುತಿಸ ಬಹುದು. ಉದಾಹರಣೆಗೆ, ಭೌತಿಕ–ಆಧ್ಯಾತ್ಮಿಕ ಕ್ಷೇತ್ರ ಗಳಿಗೆ ಅನುಗುಣವಾಗಿ, 'ಬಾಹ್ಯ' ಮತ್ತು 'ಆಂತರಿಕ' ಜಗತ್ತುಗಳ ಕಲ್ಪನೆಯು ಪ್ರಚಲಿತವಾಗಿದೆ. ಅದನ್ನು ದಿನನಿತ್ಯದ ಸಾಮಾಜಿಕ ಬದುಕಿಗೆ ಅನ್ವಯಿಸಿದಾಗ, ಆರ್ಥಿಕತೆ ಮತ್ತು ಸಂಪಾದನೆಯ ಕ್ಷೇತ್ರವಾದ 'ಹೊರ' ಜಗತ್ತು ಮತ್ತು ಕೌಟುಂಬಿಕ ಜೀವನದ ಚಿಹ್ನೆಯಾದ 'ಒಳಗಿನ' ಕ್ಷೇತ್ರದ ಅರ್ಥಗಳನ್ನೂ ಮೈಗೂಡಿಸಿಕೊಳ್ಳು ತ್ತದೆ. ಇದೇ ವೈರುಧ್ಯವನ್ನು ಪುರುಷಪ್ರಧಾನ ಹೊರ ವಲಯ ಮತ್ತು ಸ್ತ್ರೀ ಪ್ರಧಾನ ಒಳ ಅಥವಾ ಕೌಟುಂಬಿಕ ವಲಯಗಳಾಗಿಯೂ ವ್ಯಾಖ್ಯಾನಿಸಬಹುದು.

ರಾಷ್ಟ್ರೀಯ ಮತ್ತು ಸುಧಾರಣಾ ಚಳವಳಿಗಳು ಅನೇಕ ಸಂಬಂಧ–ಸಂಪರ್ಕಗಳನ್ನು ಹೊಂದಿದ್ದು, ಎರಡು ಸ್ತರ ಗಳಲ್ಲಿ ಹೋರಾಟ ನಡೆಸಿದವು. ಒಂದು, ಪಾಶ್ಚಾತ್ಯರ ಬಗೆಗಿನ ವಿರೋಧ ಪ್ರಕಟಣೆ. ಮತ್ತೊಂದು, ಭಾರತೀಯ ಸಾಮಾಜಿಕ ವ್ಯವಸ್ಥೆಯ ಲೋಪಗಳ ಸುಧಾರಣೆ. ಈ ಸ್ತರಗಳು ಪ್ರತ್ಯೇಕವಾಗಿರದೆ, ಪರಸ್ಪರ ಹೆಣೆದುಕೊಂಡಿದ್ದ ರಿಂದ, ಇಂಥ ಸನ್ನಿವೇಶದಲ್ಲಿ ಮೂಡಿದ ಮಹಿಳಾ ಪ್ರಶ್ನೆಯು ಇಬ್ಬಗೆಯ ಅರ್ಥವನ್ನು ಪಡೆಯಿತು. ಆ ಶತ ಮಾನದಲ್ಲಿ ಹೆಣ್ಣಿನ ಬದುಕನ್ನು ಆವರಿಸಿದ್ದ ಅನೇಕ ಸಾಮಾಜಿಕ ಅನಿಷ್ಟಗಳ ನಿರ್ಮೂಲನೆ ಸುಧಾರಣ ಚಳವಳಿಯ ಉದ್ದೇಶವಾಗಿದ್ದು, ಆ ಕಾರ್ಯದಲ್ಲಿ ಸ್ತ್ರೀತ್ವದ ಹೊಸ ಕಲ್ಪನೆಯೇ ಸೃಷ್ಟಿಯಾಯಿತು. ಮುಖ್ಯ ವಾಗಿ, ಆಗಿನ ಮಹಿಳೆಯ, ಅದರಲ್ಲೂ ಆಗಷ್ಟೇ ರೂಪು ಗೊಳ್ಳುತ್ತಿದ್ದ ಮಧ್ಯಮ ವರ್ಗದ ಮಹಿಳೆಯ ಕಾರ್ಯ ಕ್ಷೇತ್ರದ, ಆಚಾರ-ವಿಚಾರದ ಚರ್ಚೆ ನಡೆಯಿತು. 'ಆಧುನಿಕ' ಜಗತ್ತಿನ ಸಮ್ಮುಖದಲ್ಲಿ ಕುಟುಂಬ ರಚನೆಯ ಹೊಸ ಮೌಲ್ಯಗಳನ್ನೂ ಮಹಿಳೆಯರ ನಡವಳಿಕೆಯ ಸೂತ್ರಗಳನ್ನು ನಿರ್ಧರಿಸಲಾಯಿತು. ಭೌತಿಕ/ಬಾಹ್ಯ/ ಸಾರ್ವಜನಿಕ ರಂಗಗಳು ಪುರುಷರ ಪಾಲಾಗಿ, ಕುಟುಂಬದ ಒಳಗಿನ ಕ್ಷೇತ್ರದೊಂದಿಗೆ ಮಹಿಳೆಯನ್ನು ಗುರುತಿಸ ಲಾಯಿತು. ಅಂದಿನ ರಾಜಕೀಯ ಉದ್ದೇಶಗಳಿಗೆ ತಕ್ಕಂತೆ, ಮಹಿಳೆಯನ್ನು ಭಾರತೀಯ ಸಂಸ್ಕೃತಿಯ ಆಧ್ಯಾತ್ಮಿಕ ಗುಣಗಳ ಆಧಾರ ಸ್ತಂಭವಾಗಿ ಕಾಣಲಾಯಿತು. ಜೀವನೋಪಾಯಕ್ಕಾಗಿ ಬೇಕಾಗುವ ಯಾವ ಕೌಶಲ್ಯಗಳ ಶಿಕ್ಷಣವನ್ನೂ ನೀಡದೆ, ಕೌಟುಂಬಿಕ, ಸಾಂಸ್ಕೃತಿಕ ಮತ್ತು ಕಲಾ ಸಾಧನೆಗಳಿಗೆ ಹೆಚ್ಚು ಮಹತ್ವ ಕೊಟ್ಟ ಆ ಕಾಲದ ಸ್ತ್ರೀ ಶಿಕ್ಷಣ ಇದಕ್ಕೆ ಉತ್ತಮ ಉದಾಹರಣೆ.

ಒಟ್ಟಿನಲ್ಲಿ ಕೇಳುವುದಾದರೆ, 'ರಾಷ್ಟ್ರ'ದ ಕಲ್ಪನೆಯ ನಿರ್ಮಾಣದಲ್ಲಿ ಸ್ತ್ರೀತ್ವದ ಪ್ರತೀಕವನ್ನು ರಾಷ್ಟ್ರೀಯ ಆಂದೋಲನವು ದುಡಿಸಿಕೊಂಡಿತು. 'ಒಳ' ಕ್ಷೇತ್ರ ದೊಂದಿಗೆ ಸಮೀಕರಣ ಹೊಂದಿದ ಹೆಣ್ಣು, ಅಲ್ಲಿನ ನೈತಿಕ

ಮೌಲ್ಯಗಳ ಜವಾಬ್ದಾರಿ ಹೊತ್ತು, ತ್ಯಾಗ, ಪಾವಿತ್ರ್ಯತೆ, ಧಾರ್ಮಿಕತೆಯ ಸ್ವರೂಪವಾಗಿ ಚಿತ್ರಿತಳಾದಳು (ಅಂದಿನ ಸಾಹಿತ್ಯಿಕ ಮತ್ತು ರಾಜಕೀಯ ಬರವಣಿಗೆಗಳು ಇದಕ್ಕೆ ಸಾಕ್ಷಿ). ಹೀಗೆ, ಭಾರತೀಯ ಇತಿಹಾಸದ ನಿರ್ದಿಷ್ಟ ಸನ್ನಿವೇಶಗಳಲ್ಲಿ ಮಹಿಳೆಯ 'ಪ್ರಕೃತಿ'ಯು ಭಾರತೀಯ ಸಂಸ್ಕೃತಿಯ ಪ್ರತೀಕವಾಗಿತ್ತು (ಆಗಿದೆ) ಮಾತ್ರವಲ್ಲ, 'ದೇಶ'ದ ಪರಿಕಲ್ಪನೆಯನ್ನು ಅರ್ಥೈಸುವಲ್ಲಿ ಅದರ ಸ್ವರೂಪವನ್ನು ನಿರ್ಧರಿಸುವಲ್ಲಿ ಸಹಾಯಕವಾಯಿತು. ಪುರುಷ–ಸಂಸ್ಕೃತಿ, ಸ್ತ್ರೀ–ಪ್ರಕೃತಿ ಎಂಬ ಸಮೀಕರಣವನ್ನು ಭಾರತೀಯ ಸಂದರ್ಭದಲ್ಲಿ ಅಷ್ಟು ಸರಳವಾಗಿ ಮಾಡ ಲಾಗುವುದಿಲ್ಲ ಎನ್ನುವುದನ್ನು ಇದು ತೋರಿಸುತ್ತದೆ.

ಹೆಣ್ಣನ್ನು ಪ್ರಕೃತಿಯೊಡನೆ ಗುರುತಿಸಿಲ್ಲ ಎಂದು ಇದರ ಅರ್ಥ ಖಂಡಿತಾ ಅಲ್ಲ. ಹೆಣ್ಣನ್ನು 'ಕ್ಷೇತ್ರ'ವೆಂದು ಪರಿಗಣಿಸಿ, ಸಂತಾನೋತ್ಪತ್ತಿಗೆಂದೇ ಮೀಸಲುಗೊಳಿಸುವ ಧೋರಣೆಯನ್ನು ಯಾರೂ ಅಲ್ಲಗಳೆಯುವಂತಿಲ್ಲ. ನನ್ನ ವಾದ ಇಷ್ಟೆ : ಪಾಶ್ಚಾತ್ಯ ಆಲೋಚನಾ ಧಾಟಿಯಲ್ಲಿ ಮನೆ ಮಾಡಿರುವ ದ್ವಿತ್ವಾತ್ಮಕ ಪರಿಕಲ್ಪನೆಗಳು ಸ್ತ್ರೀವಾದದ ಪರ್ಯಾಯ ಸಾಧ್ಯತೆಗಳನ್ನು ಮೊಟಕು ಮಾಡಿದ್ದರೆ, ನಮ್ಮ ಸಂದರ್ಭದಲ್ಲಿ ಆ ದ್ವಿತ್ವಾತ್ಮಕತೆಯು ಖಚಿತ ಹಾಗು ಸಮಾನವಾಗದಿರುವುದರಿಂದಲೇ ಹಲವು ಗೊಂದಲಗಳಿಗೆ ದಾರಿ ಮಾಡಿದೆ. ಸನ್ನಿವೇಶದ ಒತ್ತಡ ಹಾಗು ಅಗತ್ಯಗಳಿಗೆ ತಕ್ಕಂತೆ, ದ್ವಿತ್ವಾತ್ಮಕ ಕಲ್ಪನೆಗಳ ಎರಡು ಧ್ರುವಗಳು ಸ್ಥಾನಪಲ್ಲಟವಾಗುತ್ತಾ ಅಥವಾ ಮಗಚಿಕೊಳ್ಳುತ್ತಾ ಇರುತ್ತವೆ. ಹೀಗಾಗಿ, ಸ್ತ್ರೀ ಪ್ರಕೃತಿಯು ಸ್ವರೂಪವೂ ಆಗಬಹುದು, ಸಂಸ್ಕೃತಿಯ (ನೈತಿಕ ಮೌಲ್ಯಗಳ) ಪ್ರತೀಕವೂ ಆಗಬಹುದು.

ಆದರೆ, ಈ ತೂಗುವಿಕೆಯಲ್ಲಿ ಮೊದಲು ಘಾಸಿಗೊಳ ಗಾಗುವುದು ಮಹಿಳಾ ಪ್ರಶ್ನೆ. ಧೃವೀಕೃತ ಕಲ್ಪನೆಗಳಲ್ಲಿ ದಬ್ಬಾಳಿಕೆ ನಡೆಸುವವರನ್ನು ಮತ್ತು ದಬ್ಬಾಳಿಕೆಗೆ ಒಳಗಾಗುವವರನ್ನು ಸ್ಪಷ್ಟವಾಗಿ ಗುರುತಿಸಲು ಸಾಧ್ಯ ವಾದರೆ, ನಮ್ಮ ಸಂದರ್ಭದಲ್ಲಿ ಅದು ಹೆಚ್ಚು ಕಷ್ಟ. ಉದಾಹರಣೆಗೆ, ರಾಷ್ಟ್ರೀಯ ಚಳವಳಿಯಲ್ಲಿ, ಹೆಣ್ಣು ಮತ್ತು ಭಾರತೀಯ ಸಂಸ್ಕೃತಿಯ ಸಮೀಕರಣದ ಜತೆ ಜತೆಗೇ, ಬಾಹ್ಯ–ಆಂತರಿಕ, ಸಾರ್ವಜನಿಕ–ಖಾಸಗಿ ಇತ್ಯಾದಿ ಪರಿಕಲ್ಪನೆಗಳೂ ಬಲಿತವು. ಈ ಕಲ್ಪನೆಗಳು ಪಿತೃಪ್ರಧಾನ ವ್ಯವಸ್ಥೆ ಮತ್ತು ಅದರ ಅಂಗವಾದ ವಿವಿಧ ಸಾಮಾಜಿಕ, ಆರ್ಥಿಕ, ರಾಜಕೀಯ ಲಿಂಗ ಅಸಮಾನತೆ ಗಳಿಗೆ ಭದ್ರ ಬುನಾದಿ ಹಾಕಿದವು ಎನ್ನುವುದನ್ನು ಮರೆಯುವಂತಿಲ್ಲ.

## ಸ್ವಾತಂತ್ರ್ಯಾನಂತರದ ಸಂದರ್ಭ

ರಾಷ್ಟ್ರೀಯತೆಯ ಸನ್ನಿವೇಶಕ್ಕೆ ಹೋಲಿಸಿದಾಗ, ಭಾರತದ ಸ್ವಾತಂತ್ರ್ಯದ ಕೆಲ ದಶಕಗಳ ಅನಂತರ ಮಹಿಳಾ ಪ್ರಶ್ನೆಯು ವಿಶೇಷ ತಿರುವನ್ನು ಪಡೆಯಿತು. ಸ್ತ್ರೀತ್ವದ ಮತ್ತು ಅದಕ್ಕೆ ಸಂಬಂಧಿಸಿದ ಮೌಲ್ಯಗಳ ನಿರೂಪಣೆಯ ಜಾಗದಲ್ಲಿ ಸ್ತ್ರೀ–ಪುರುಷ ಸಮಾನತೆಯ ಪ್ರಶ್ನೆ ಇಂದು ಹೆಚ್ಚು ಗಮನ ಸೆಳೆದಿದೆ. ಅನೇಕ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ರಂಗಗಳಲ್ಲಿ ತಲೆದೋರುವ ಲಿಂಗ ಅಸಮಾನತೆಯ ಆಯಾಮಗಳನ್ನು ಗ್ರಹಿಸಿ, ಪರಿಹರಿಸುವುದು ಸಮಕಾಲೀನ ಸ್ತ್ರೀವಾದಿ ಚಳವಳಿಯ ಮುಖ್ಯ ಉದ್ದೇಶವಾಗಿದೆ. ಸಮಾಜದಲ್ಲಿ ಹೆಂಗಸರ ಸ್ಥಾನಮಾನವು ಉತ್ತಮಗೊಳ್ಳಲು ಅವರಿಗೆ ಸಮಾನ ಅವಕಾಶಗಳು ಸಿಗಬೇಕು ; ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವ ಹಕ್ಕು ಅವರಿಗೆ ಇರಬೇಕು – ಇವೇ ಮುಂತಾದ ವಾದಗಳನ್ನು ಪ್ರತಿಪಾದಿಸುವ ಮೂಲಕ ಮಹಿಳಾ ಪ್ರಶ್ನೆಯು ತನ್ನ ಹೊಸ ಸ್ವರೂಪವನ್ನು ಪ್ರದರ್ಶಿಸಿದೆ.

ಸಂವಿಧಾನುಸಾರ ಹೆಂಗಸರಿಗೆ ವಿವಿಧ ಹಕ್ಕುಗಳನ್ನು ಸಾಂಕೇತಿಕವಾಗಿ ನೀಡಲಾಗಿದ್ದರೂ, ನಿಜ ಜೀವನದಲ್ಲಿ ಅವುಗಳ ಪ್ರಭಾವ ಎಳ್ಳಷ್ಟೂ ಆಗದಿರುವುದು ಸ್ಪಷ್ಟ ವಾಗಿದೆ. ಕೌಟುಂಬಿಕ, ಔದ್ಯೋಗಿಕ, ಶೈಕ್ಷಣಿಕ ಹಾಗು ಇತರ ಕ್ಷೇತ್ರಗಳಲ್ಲಿ ಮಹಿಳೆ ಎದುರಿಸುವ ಅಸಮಾನತೆಗಳು ಸಮಾಜದಲ್ಲಿನ ಅವಳ ಕೀಳು ಸ್ಥಾನದ ಪರಿಣಾಮ ಮಾತ್ರ ಆಗಿರದೆ, ಆ ಸ್ಥಾನವನ್ನು ಭದ್ರಿಸುವ ಸಾಧನವು ಆಗಿದೆ. ದೇಶ ತುಳಿಯುತ್ತಿರುವ ಆರ್ಥಿಕ ಅಭಿವೃದ್ಧಿಯ ಹಾದಿಯು ಸೃಷ್ಟಿಸುತ್ತಿರುವ ಮೂಲಭೂತ ಬದಲಾವಣೆ ಗಳು ಇಂಥ ಅಸಮಾನತೆಗಳನ್ನು ತೊಡೆದು ಹಾಕುವ ಬದಲು, ಅವುಗಳಿಗೆ ವಿಶೇಷ ಅರ್ಥಗಳನ್ನು ಸೇರಿಸುತ್ತಾ ಬಂದಿದೆ. ಸ್ತ್ರೀ–ಪುರುಷರ ಅಸಮಾನ ಸಂಬಂಧಗಳನ್ನು ದಾಖಲಿಸುವಲ್ಲಿ ಈ ವಿಭಿನ್ನ ಸಂದರ್ಭಗಳು ಮುಖ್ಯ ವಾಗುತ್ತವೆ. ಈ ಹಿನ್ನಲೆಯಲ್ಲಿ 'ಮಹಿಳಾ ಅಧ್ಯಯನ'ವ

ಮಹತ್ವಪೂರ್ಣವಾಗುತ್ತದೆ. ಆಧುನೀಕರಣ ಮತ್ತು ಆರ್ಥಿಕ ಅಭಿವೃದ್ಧಿಯ ಸಂದರ್ಭದಲ್ಲಿ ಗೋಚರವಾಗುವ ಲಿಂಗಾಧರಿತ ಅಸಮಾನತೆಗಳನ್ನು ವಿಶ್ಲೇಷಿಸಿ, ಹೆಣ್ಣನ್ನು ಸಾಮಾಜಿಕ ಬದುಕಿನ ಮುಖ್ಯವಾಹಿನಿಯಿಂದ ಅಂಚಿಗೆ ಸರಿಸುವ ಪ್ರಕ್ರಿಯೆಯನ್ನು ನಿಲ್ಲಿಸಿ, ಆಕೆಯ ಜೀವನ ಸಾಧ್ಯತೆಗಳನ್ನು ಉತ್ತಮಗೊಳಿಸುವುದೇ ಅದರ ಪ್ರಮುಖ ಗುರಿ ಅಂದರೆ ತಪ್ಪಾಗಲಾರದು. ಸ್ತ್ರೀವಾದದಂತೆ ಮಹಿಳಾ ಅಧ್ಯಯನವೂ ಹೆಣ್ಣಿನ ಸಾಮಾಜಿಕ ಸ್ಥಾನ ಮಾನವನ್ನು ಅಳೆಯಲು 'ಹಕ್ಕು-ಅಸಮಾನತೆ'ಗಳ ಪರಿಭಾಷೆಯನ್ನೇ ದುಡಿಸಿಕೊಳ್ಳುತ್ತದೆ. ಈ ಪರಿಭಾಷೆಯೇ ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯೋತ್ತರ ಭಾರತದ ಮಹಿಳಾ ಪ್ರಶ್ನೆಯ ಸ್ವರೂಪದಲ್ಲಿನ ಭಿನ್ನತೆಗೆ ಮೂಲ ಕಾರಣ.

ಐತಿಹಾಸಿಕವಾಗಿ ನೋಡಿದರೆ, ಮಹಿಳಾ ಪ್ರಶ್ನೆಯ ಸ್ವರೂಪದಲ್ಲಾದ ವ್ಯತ್ಯಾಸ ಒಂದು ರೀತಿಯಲ್ಲಿ ಅನಿವಾರ್ಯವೇ. ಆದರೆ, ಸಮಾನತೆ-ಅಸಮಾನತೆಯ ಕಲ್ಪನೆಯನ್ನು ಕೇಂದ್ರ ವಸ್ತುವಾಗಿಸಿಕೊಂಡಿರುವ ಈ ದೃಷ್ಟಿಕೋನವು ಅದನ್ನು ವಿಮರ್ಶಾತ್ಮಕವಾಗಿ ಕಂಡಿರುವುದು ಬಹಳ ಕಡಿಮೆ, ಇಂಥ ಪರೀಕ್ಷಕ ದೃಷ್ಟಿ ನಮ್ಮ ಸಂದರ್ಭದಲ್ಲಿ ಹೆಚ್ಚು ಅಗತ್ಯವೆನ್ನುವುದು ನನ್ನ ಅಭಿಪ್ರಾಯ. ಇದಕ್ಕೆ ಕಾರಣಗಳಿಲ್ಲದೆ ಇಲ್ಲ. ಸ್ತ್ರೀ-ಪುರುಷ ಸಂಬಂಧಗಳನ್ನು ಪ್ರತಿ ಸಂಸ್ಕೃತಿಯೂ ವಿಶಿಷ್ಟವಾಗಿ ಕಲ್ಪಿಸುತ್ತದೆ. ಇದರಿಂದಾಗಿ, ಲಿಂಗಾಧರಿತ ಅಸಮಾನತೆ ಎಷ್ಟೇ ಯೂನಿವರ್ಸಲ್ ಆದರೂ, ಸಮಾಜದಿಂದ ಸಮಾಜಕ್ಕೆ ಅದರ ಸ್ವರೂಪದಲ್ಲಿ ಬದಲಾವಣೆಗಳಿರುವುದು ಸಾಧ್ಯ. ಆದ್ದರಿಂದ ಸಮಾನತೆ-ಅಸಮಾನತೆಯ ಪ್ರಶ್ನೆಯನ್ನು ಆಯಾ ಸಂಸ್ಕೃತಿಯ ವಿಶಿಷ್ಟ ಸನ್ನಿವೇಶದಲ್ಲಿ ಚರ್ಚಿಸಬೇಕಾಗುತ್ತದೆ.

ಎಲ್ಲಿಯವರೆಗೆ ನಾವು ಸ್ತ್ರೀ-ಪುರುಷ ಸಂಬಂಧ ಮತ್ತು ಭಿನ್ನತೆಯನ್ನು ಶ್ರೇಣೀಕೃತ ಪರಿಭಾಷೆಯಲ್ಲಿ ವ್ಯಾಖ್ಯಾನಿಸುವೆವೋ ಅಲ್ಲಿಯವರೆಗೆ ದ್ವಿತ್ವಾತ್ಮಕ ಕಲ್ಪನೆಗಳಾಚೆ ಕಾಲಿಡುವುದು ಸಾಧ್ಯವಾಗುವುದಿಲ್ಲ. ಲಿಂಗ ಭಿನ್ನತೆಗೆ ಶ್ರೇಣಿಯ ರೂಪ ಕೊಟ್ಟಾಗ, ಅದು ಸ್ತ್ರೀ-ಪುರುಷ ಧ್ರುವಗಳನ್ನಷ್ಟೇ ಸೂಚಿಸುವುದಿಲ್ಲ ; ಕೀಳು/ಮೇಲು, ಅಬಲ/ಸಬಲ ಇತ್ಯಾದಿ ವಿಶೇಷಣಗಳನ್ನೂ ಗಂಟು ಹಾಕಿಕೊಳ್ಳುತ್ತದೆ. ಸಮಾನತೆ-ಅಸಮಾನತೆಯ ಕಲ್ಪನೆಯೂ ಇದೇ ದ್ವಿತ್ವಾತ್ಮಕ ಧಾಟಿಗೆ ಸಂಬಂಧಿಸಿದ ದನಿ. ಹೀಗಾಗಿ, 'ಭಿನ್ನತೆ'ಯನ್ನು ಹೊಸ ರೀತಿಗಳಲ್ಲಿ ಕಲ್ಪಿಸುವ ಪ್ರಯತ್ನವನ್ನು ನಾವು ಮಾಡಬೇಕು. ಶ್ರೇಣಿಯೊಂದಿಗಿನ ಅದರ ಸಮೀಕರಣವನ್ನು ಪ್ರಶ್ನಿಸಿ, ಅಸಮಾನತೆಯನ್ನಾಗಲಿ, ದಬಾವಣೆಯ ವಿವಿಧ ಮುಖಗಳನ್ನಾಗಲಿ ನಾನು ಅಲ್ಲಗಳೆಯುತ್ತಿಲ್ಲ. ಬದಲಾಗಿ ಸದಾ ಬದಲಾವಣೆ ಹೊಂದುತ್ತಿರುವ ದಬ್ಬಾಳಿಕೆಯ ಸ್ವರೂಪವನ್ನು ನಿದರ್ಶಿಸಲು ಹೆಚ್ಚು ಕ್ರಿಯಾಶೀಲವಾದ ಕಲ್ಪನೆಯ ಅಗತ್ಯವಿದೆ ಎನ್ನುವುದಷ್ಟೇ ಒತ್ತಿ ಹೇಳುತ್ತಿದ್ದೇನೆ. ದ್ವಿತ್ವಾತ್ಮಕ ಚಿಂತನೆಯಾಚೆ ಈ ಕಲ್ಪನೆ ನಿಲ್ಲಬೇಕು ಎಂದು ಸೇರಿಸಬೇಕಾದ ಅಗತ್ಯ ಬಹುಶಃ ಇಲ್ಲ. ನನ್ನ ಅಭಿಪ್ರಾಯದಲ್ಲಿ, ಅಸಮಾನತೆಯ ಪ್ರಶ್ನೆ ಹೇಗೆ ದ್ವಿತ್ವಾತ್ಮಕತೆಯನ್ನು ಪುನರುಚ್ಚರಿಸುತ್ತದೆಯೋ, ಸ್ತ್ರೀ-ಪುರುಷ ಐಡೆಂಟಿಟಿಯ ಪ್ರಶ್ನೆಯೂ ಅದೇ ಚೌಕಟ್ಟಿನೊಳಗೆ ಬಂಧಿತವಾಗಿದೆ. ಸ್ತ್ರೀ – ಪುರುಷ ಐಡೆಂಟಿಟಿಗಳ ಬಗ್ಗೆ ಮಾತನಾಡುವ ಬದಲು, ಅಸಮಾನತೆಯ ಆಳವನ್ನು ಗ್ರಹಿಸಲು ಸ್ತ್ರೀ ಮತ್ತು ಪುರುಷರನ್ನು ಬೆಸೆಯುವ ಅಸಮಾನ ಸಾಮಾಜಿಕ ಸಂಬಂಧಗಳ ಹಾಗೂ ಸಂದರ್ಭಗಳೆಡೆಗೆ ಗಮನ ಹರಿಸಬೇಕು. ದ್ವಿತ್ವಾತ್ಮಕ ಚಿಂತನೆಯನ್ನು ಪ್ರಶ್ನಿಸಲು ಹಾಗೂ ನಮ್ಮ ಸಂದರ್ಭದಲ್ಲಿ ಸ್ತ್ರೀ - ಪುರುಷ ಸಂಬಂಧಗಳು ಪಡೆದುಕೊಳ್ಳುವ ವೈಶಿಷ್ಟ್ಯಗಳನ್ನು ಅರ್ಥೈಸಲು ಆಗ ಸಾಧ್ಯವಾಗಬಹುದು.

●

—ತೇಜಸ್ವಿನಿ ನಿರಂಜನ

---

* K. Sangari and S. Vaid (ed), *Recasting Women*, New Delhi, Kali, 1989 ನಲ್ಲಿ ಪ್ರಕಟವಾಗಿದೆ.

# ದೇವದಾಸಿ - ಸವದತ್ತಿ ಎಲ್ಲಮ್ಮ - ರೇಣುಕಾ

ಬೆಳಗಾವಿ ಜಿಲ್ಲೆಯ ಪೂರ್ವದ ತಾಲ್ಲೂಕುಗಳಲ್ಲಿ ಒಂದು ಪ್ರಮುಖ ತಾಲ್ಲೂಕು ಸವದತ್ತಿ ತಾಲ್ಲೂಕು. ಆ ಊರಿನ ಪ್ರಮುಖ ಸ್ಥಳವೇ ಸವದತ್ತಿ. ಸವದತ್ತಿ ಕರ್ನಾಟಕದ ಗತಕಾಲದ ರಟ್ಟ ಸಾಮ್ರಾಟರ ರಾಜಧಾನಿಯಾಗಿದ್ದಿತು. ಆದರೆ ! ಇಂದು ಅದೇ ಸವದತ್ತಿ ಆಗಾಗ ಪತ್ರಿಕೆಗಳಲ್ಲಿ ಕಾಣುತ್ತಿರುವುದು ಪ್ರತಿ ವರುಷ ಅಲ್ಲಿ ದೇವದಾಸಿಯರಾಗಿ ಪರಿವರ್ತಿತರಾಗುವ ನಿರ್ಗತಿಕ, ಸಂಪ್ರದಾಯದ ಕಟ್ಟುಪಾಡಿಗೆ ತಮ್ಮ ಅಜ್ಞಾನದಿಂದ ಬಲಿ ಬೀಳುವ ಅನೇಕ ಮಹಿಳಾಮಣಿಗಳಿಂದ,ಅಲ್ಲಿಗೆ ಹೋಗುವ ಜನರು ಅನೇಕರಾದರೂ ಅದನ್ನು ಕಂಡವರಿಗೆ ಇದರ ಅರಿವು ಬಾರದೇ ಇರದು.

ರೇಣುಕೆಯು ಜಮದಗ್ನಿ ಋಷಿಯ ಮಡದಿ. ಅವಳು ನೀರಿಗೆ ಹೋದಾಗ ಚಂಚಲೆಯಾದಳೆಂಬ ಅಪರಾಧಕ್ಕಾಗಿ ಪತಿ ಜಮದಗ್ನಿ ಮಗ ಪರಶುರಾಮನಿಗೆ ಅವಳ ಶಿರಛೇದನಕ್ಕೆ ಅಪ್ಪಣೆ ಕೊಡುವನು. ಅದರಂತೆ ಅವಳ ಶಿರ ಕತ್ತರಿಸಲ್ಪಡುವುದು. ಮಗನಿಗೆ ತಂದೆಯಿತ್ತ ಮಾತಿನಿಂದ ರೇಣುಕೆ ಮತ್ತೆ ಪ್ರತ್ಯಕ್ಷಳಾಗುವಳು. ಇದು ಪುರಾಣದ ಜನಜನಿತ ಕಥೆ. ಆದರೆ ಅದೇ ಮಾತೆಯ ಈ ದೇವಸ್ಥಾನವೆಂದು ಪ್ರತೀತಿಯನ್ನೀಯುವ ಜನ ಈ ಸಂಪ್ರದಾಯ ಹೇಗೆ ಪ್ರವೇಶಿಸಿತೆಂದು ವಿವರವೀಯಲು ಅಸಹಾಯಕರಾಗಿರುವರು. ಇತಿಹಾಸದ ಪುಟಗಳನ್ನು ಕೆದಕಿದ ಅಲ್ಲಿಯ ಪರಿಸರವನ್ನು ಅಧ್ಯಯನ ಮಾಡಿದ ವಿದ್ವಾಂಸರು ಈ ದೇವಸ್ಥಾನ ಜೈನರ ಪದ್ಮಾಂಬೆಯದ್ದಾಗಿದ್ದಿತೆಂದೂ ಸಾಧಿಸಿರುವರು. ಆದರೂ ಉಚ್ಚ ಸಂಪ್ರದಾಯದ ಇತಿಹಾಸವುಳ್ಳ ಈ ದೇವಸ್ಥಾನವಿಂದು ನಿರ್ಗತಿಕ ಹೆಣ್ಣು ಮಕ್ಕಳನ್ನು ಜೀವನದಲ್ಲಿ ಅಡ್ಡದಾರಿಗೊಯ್ಯುವ ಕಾರ್ಯದಲ್ಲಿ ನಿರತವಾಗಿರುವುದು ಸೋಜಿಗದ ಮತ್ತು ವಿಷಾದನೀಯ ಸಂಗತಿಯಾಗಿದೆ. ದೇವಿಯ ಹೆಸರಿನಲ್ಲಿ ಈ ದೇವದಾಸಿಯರನ್ನು ನಿರ್ಮಾಣ ಮಾಡುವ ಕೆಟ್ಟ ಕಾರ್ಯದ ಒಂದು ಜಾಲವೇ ಇರಬಹುದು. ಆದಕ್ಕಾಗಿಯೇ ಇದು ಎಲ್ಲ ಕಟ್ಟಳೆಗಳನ್ನು ಮೀರಿ ಹುಲುಸಾಗಿ ಬೆಳೆಯುತ್ತಿರುವುದು ಕಂಡುಬರುತ್ತದೆ. ಕಾಯ್ದೆಯ ಕದಂಬ ಕೈಗಳು ಕೂಡ ಅಸಹಾಯಕವಾಗಿವೆಯೆಂದು ಹೇಳಬೇಕಾಗುತ್ತದೆ.

ಸವದತ್ತಿಯು ಪೂರ್ವಕ್ಕೆ ಕೇವಲ ನಾಲ್ಕಾರು ಕಿಲೋ ಮೀಟರುಗಳಷ್ಟು ಅಂತರದ ಒಂದು ಎತ್ತರ ಪ್ರದೇಶದಲ್ಲಿ ಈ ದೇವಸ್ಥಾನವಿರುವುದು. ಒಂದು ಭವ್ಯ ಪುರಾತನ ಮಂದಿರವಿರುವುದು. ಇದರ ಪರಿಸರವೂ ಅಷ್ಟೇ. ಪ್ರತಿ ಹುಣ್ಣಿಮೆಗೆ ಜಾತ್ರೆ ಜರುಗುವುದು. ಪ್ರತಿನಿತ್ಯ ಅನೇಕ ಭಕ್ತಾದಿಗಳು ದೇವಿಯ ದರ್ಶನಕ್ಕೆ ಬರುವರು. ಆದರೆ ಬರುವ ಜನರಲ್ಲಿ ದೇವದಾಸಿಯರದ್ದೂ ಒಂದು ಗುಂಪಿರುತ್ತದೆ.

ಧವನದ ಹುಣ್ಣಿಮೆಗೆ ಉತ್ತರ ಕರ್ನಾಟಕ, ದಕ್ಷಿಣ ಮಹಾರಾಷ್ಟ್ರದಿಂದ ಅನೇಕ ಭಕ್ತಾದಿಗಳು ಜಾತ್ರೆಗೆ ಬಂದು ಲಕ್ಷಾಂತರ ಜನರು ದೇವಿಯ ದರ್ಶನದಿಂದ ಪುನೀತರಾಗುವರು. ಹುಣ್ಣಿಮೆಯ ರಾತ್ರಿ ಹೆಣ್ಣುಮಕ್ಕಳಿಗೆ ದೇವದಾಸಿ ದೀಕ್ಷೆಯೀಯುವ ಕಾರ್ಯ ಸಾರಾಸಗಟಾಗಿ ನಡೆಯುತ್ತದೆ. ಅಂದಿನಿಂದ ಅವರ ದೇಹ ಮಾರಾಟದ ಸರಕಾಗುತ್ತದೆ. ಅವರು ತಾವಿರುವ ಊರುಗಳಲ್ಲಿ ಅಥವಾ ನಗರದ ವೇಶ್ಯಾವಾಟಿಕೆಗೆ ಸಾಗಿಸಲ್ಪಡುತ್ತಾರೆ. ಈ ಪ್ರಕಾರ ದೇವದಾಸಿಯಾದವರು ಈ ದೇವಿಯ ಖಾಯಂ ಭಕ್ತರೂ ಆಗಿರುತ್ತಾರೆ. ವಿಚಿತ್ರವೆಂದರೆ ಈ ದೇವದಾಸಿಯರಾಗುವವರಲ್ಲಿ ಉಚ್ಚವರ್ಗಕ್ಕೆ ಸೇರಿದವರು ಯಾರೂ ಇಲ್ಲದಿರುವುದು. ಎಲ್ಲ ಹೆಣ್ಣು ಮಕ್ಕಳು ಬಡ ದಲಿತ, ಹಿಂದುಳಿದ ವರ್ಗಕ್ಕೆ ಸೇರಿದವರೇ ಆಗಿರುತ್ತಾರೆ. ದೇವಿಯ ಮಹಿಮೆ ಇವರಿಗಷ್ಟೇ ಸೀಮಿತವಾಗಿದೆಯೇ ಎನ್ನುವುದು ಸೋಜಿಗದ ವಿಷಯವಾಗಿದೆ. ಮೇಲಾಗಿ ಇದನ್ನು ಅದೇ ತೆರನಾಗಿ ಮೇಲ್ವರ್ಗದವರು ಇಂದಿಗೂ ಕಾಯ್ದುಕೊಂಡು ಬಂದಿರುವುದು ಸಹ ಅಷ್ಟೇ ಆಶ್ಚರ್ಯದ ವಿಷಯವಾಗಿದೆ. ಈ ದೇವಿಯ ಪೂಜಾರಿಗಳು ಈ ಸಂಪ್ರದಾಯದಿಂದ ದೂರವಿದ್ದವರು ಅವರಿಗೆ ಇದರ ಕಲ್ಪನೆಯೂ ಇರಲಿಕ್ಕಿಲ್ಲ. ಅದಾಗ್ಯೂ ಇದೇಕೆ ಹೀಗೆ ?

ಧವನದ ಹುಣ್ಣಿಮೆ, ಗುರು ಪೂರ್ಣಿಮೆಗೆ ತಪ್ಪದೆ ಈ ದೇವದಾಸಿಯರು ಬರುವರು. ಸಾಮಾನ್ಯವಾಗಿ ದರ್ಶನಕ್ಕೆ ಹೋದಾಗಲೂ ಈ ದೇವದಾಸಿಯರ ಅಸ್ತಿತ್ವ ದೇವಸ್ಥಾನ ಪರಿಸರದಲ್ಲಿದ್ದುದು ಕಂಡು ಬರುತ್ತದೆ. ಪುಡಿಗಾಸಿನ ಭಿಕ್ಷೆಯೂ ಈ ದೇವದಾಸಿಯರ ಕರ್ತವ್ಯವೇ ಎನ್ನುವಂತೆ ಇದ್ದುದು ಇಲ್ಲಿ ಕಂಡು ಬರುತ್ತದೆ.

ವಿಚಾರಣೆಯಂತೆ ತಿಳಿದು ಬರುವ ಅಂಶವೆಂದರೆ ದೇವಸ್ಥಾನ ಒಂದು ದತ್ತಿ ಸಂಸ್ಥೆಯಾಗಿದೆ. ಆಡಳಿತ ಮಂಡಳಿಯೂ ಇದೆ. ಸಾಕಷ್ಟು ಉತ್ಪನ್ನವೂ ಇದೆ. ಆದರೆ ಯಾವ ಸ್ವಚ್ಛತೆಯೂ ಈ ಪರಿಸರದಲ್ಲಿಲ್ಲ. ವ್ಯವಸ್ಥೆಯೂ ಅಷ್ಟಕ್ಕಷ್ಟೇ. ಈ ದೇವದಾಸಿಯರ ನಿಯಂತ್ರಣಕ್ಕೆ ಕಠಿಣ ಕ್ರಮಗಳನ್ನು ಇಲ್ಲಿ ಕೈಕೊಂಡಂತೆ ಕಂಡುಬರುವುದಿಲ್ಲ.

ಇತ್ತೀಚೆಗೆ ಕರ್ನಾಟಕ ಮಹಾರಾಷ್ಟ್ರದಲ್ಲಿ ಹಲವು ಸ್ವಯಂ ಸೇವಾ ಸಂಘಟನೆಗಳು ಪ್ರಯತ್ನಗಳನ್ನು ಆರಂಭಿಸಿವೆ.

ದೇವದಾಸಿಯ ನಿರ್ಮೂಲನ ಕಾರ್ಯ ನಿಲ್ಲಬೇಕಾದರೆ ಇಲ್ಲಿ ಢಾಣಡಂಗುರವಾಗಿ ನಡೆಯುವ ಈ ವಿಧಾನ ಬಲವಂತವಾಗಿ ನಿಯಂತ್ರಿಸಲ್ಪಡಬೇಕು. ಅದಕ್ಕೆ ಸಂಬಂಧಿಸಿದವರ ಮೇಲೆ ಕಠಿಣಕ್ರಮ ಜರುಗಬೇಕು. ಜಾತ್ರೆಯಲ್ಲಿ ಒಂದು ಸುವ್ಯವಸ್ಥೆ ಇರಬೇಕು. ಪ್ರತಿ ಹುಣ್ಣಿಮೆಗೂ ನಿಗಾ ವಹಿಸುವುದು ಆಗಬೇಕು. ಈ ದತ್ತಿ ಸಂಸ್ಥೆಯವರು ದೇವದಾಸಿ ಪದ್ಧತಿಯ ಅನಿಷ್ಟ ಪರಿಣಾಮಗಳ ಬಗೆಗೆ ಅಲ್ಲಿ ಬರುವವರಿಗೆ ಶಿಕ್ಷಣವನ್ನು ಕೊಡಬೇಕು.

●

**ಶ್ರೀಮತಿ ಲಲಿತಾ**
ಬೆಳಗಾವಿ

---

## ನೀವೆಲ್ಲೋ ಕಂಡಿರಬೇಕು

ನೀವೆಲ್ಲೋ ಕಂಡಿರಬೇಕು
ಅಲ್ಲೊಬ್ಬಳು ಇಲ್ಲೊಬ್ಬಳು
ರಾಣಿಯರನ್ನು
ನಾವೋ ಭಿಕಾರಿಣಿಯರು
ಕತ್ತಲು ಕೋಣೆಯಲ್ಲಿ
ಕುಳಿತು ಕಾಯುವೆವು
ಅವರು ಉಂಡು ಮುಗಿಸುವುದನ್ನೇ
ಅಡಿಗೆ ಕುದಿಸುವುದೋ ಹಕ್ಕು
ಪಾತ್ರೆ ತೊಳೆಯುವ
ಮುನ್ನ ಒರೆಸಿ ತಿನ್ನಲೂ
ಅಪ್ಪಣೆಯು ಬೇಕು

ನೀವೋ ಕಂಡಿರಬೇಕು
ಅಲ್ಲೊಬ್ಬಳು ಇಲ್ಲೊಬ್ಬಳು ಹೋರಾಡಿದವರನ್ನು
ನಾವೋ ಬಲಹೀನರು
ಉರಿಯುವ ಬೆಂಕಿಯನ್ನು
ಆರಿಸಲೂ ಕಣ್ಣೀರಿಳಿಸಿ
ಬಾಗಿಲ ಸಂದಿಯಿಂದ
ಉಳಿಸಿರೆಂದು ಬೇಡುತ್ತ
ಬಿಕ್ಕಲಾಗದೇ ಬೇಯುವರು

ನೀವೆಲ್ಲೋ ಕಂಡಿರಬೇಕು
ಅಲ್ಲೊಬ್ಬಳು ಇಲ್ಲೊಬ್ಬಳು
ಹಾಡಾಗಿ ಚಿಗುರಿದ್ದನ್ನು
ನಾವೆಲ್ಲ ಮಾನೆಯರು
ಶಬ್ದಗಳ ಸೊತ್ತನ್ನು
ಅಭಿವ್ಯಕ್ತಿ ಆಗಿಸದೇ
ಪುಟಗಳಲಿ ತುಂಬಿಕೊಳ್ಳದೇ
ಮಾತುಗಳಲಿ ಮೆರೆಯದೇ
ಹೂವು ಮಣ್ಣಿನಂತೆ
ಮೌನದಲಿ ಮರೆಯಾದವರು

●

—ಕು. ಉಜ್ವಲಾ ಪುಣಜಗೌಡ

# ಜಾಹೀರಾತುಗಳಲ್ಲಿ ಹೆಣ್ಣು

ಇದು ಜಾಹೀರಾತು ಯುಗ. ಇಲ್ಲಿ ಪ್ರಚಾರವಿಲ್ಲದೇ ಏನೂ ನಡೆಯುವದಿಲ್ಲ. ಭಾರೀ ಪ್ರಚಾರವಿಲ್ಲದೆ ಬರುವ ಯಾವುದೇ ವಸ್ತು ಮಾರಾಟಗೊಳ್ಳುವುದು ಸಾಧ್ಯವೇ ಇಲ್ಲವೇನೋ ? ಎಂಬಷ್ಟು ಪ್ರಚಾರದ ಅವಶ್ಯಕತೆ ಬೆಳೆದು ಬಿಟ್ಟಿದೆ. ಪ್ರಚಾರ ಮತ್ತು ಬಣ್ಣಬಣ್ಣದ ಪ್ಯಾಕಿಂಗ್ ಮುಂದೆ ಆ ವಸ್ತುವಿನ ಗುಣಮಟ್ಟ ತನ್ನ ಪ್ರಾಮುಖ್ಯತೆಯನ್ನೇ ಕಳೆದುಕೊಂಡಂತಿದೆ. ಇರಲಿ, ಇದನ್ನೂ ಒಂದು. ಬದಲಾವಣೆ ಎಂದು ಸ್ವೀಕರಿಸಬಹುದೇನೋ ? ಆದರೆ ಜಾಹೀರಾತುಗಳಲ್ಲಿ ಹೆಣ್ಣನ್ನು ಬಳಸಿಕೊಳ್ಳುವ ರೀತಿ ಮಾತ್ರ ಹೆಣ್ಣಿನ ನಿರಂತರ ಶೋಷಣೆಗೆ ಒಂದು ಉದಾಹರಣೆಯಾಗಿದೆಯೆನ್ನಬಹುದೇನೋ ? ಈಗ ಟಿ.ವಿ. ಮನೆ ಮಾತಾಗಿದೆ. ಮಾತು ಬಲ್ಲ ಮಕ್ಕಳೆಲ್ಲರ ನಾಲಿಗೆ ತುದಿಯಲ್ಲಿರುತ್ತವೆ ಟಿ.ವಿ. ಜಾಹೀರಾತುಗಳು. ಅದೂ ಅಲ್ಲದೇ ಅಸಮಾನತೆ, ಬಡತನದೊಡನೆ ಮೂಢ ನಂಬಿಕೆಗಳು ಆಳವಾಗಿ ಬೇರೂರಿರುವ ನಮ್ಮ ದೇಶದಲ್ಲಿ ಜಾಹೀರಾತುಗಳು ಅಂಥ ಭಾವನೆಗಳೇ ಬಲಗೊಳ್ಳುವಂತೆ ಮಾಡಲು ಸಹಾಯಕಾರಿಯಾಗುತ್ತವೆ.

ಈಗ "ಕೀರ್ತಿಗೊಬ್ಬ ಮಗ ಆರತಿಗೊಬ್ಬ ಮಗಳು" ಹೇಳಿಕೆಯನ್ನೇ ತೆಗೆದುಕೊಳ್ಳಿ. ಈ ಜಾಹೀರಾತು ಇಂದೂ ಹಳ್ಳಿಹಳ್ಳಿಗಳಲ್ಲಿ ಮೆರೆಯುತ್ತಿದೆ. ಏನಿದರ ಅರ್ಥ ? ಗಂಡು ಹುಡುಗನೆಂದರೆ ವಂಶದ ಕೀರ್ತಿಯನ್ನು ಉಳಿಸಿ ಬೆಳೆಸುವದಕ್ಕಾಗಿಯೇ ಹುಟ್ಟಿದವನು, ಇಂಥ ಕೀರ್ತಿವಂತನಾದವನು ಮನೆಬಾಗಿಲಿಗೆ ಬಂದಾಗ ಅವನನ್ನು ಆರತಿ ಮಾಡಿ ಒಳಗೆ ಕರೆದುಕೊಳ್ಳುವುದಕ್ಕೆ ಮಗಳು ಬೇಕು. ಆದರೆ ಇಂದು ಮನೆಯ ಇದ್ದ ಬಿದ್ದ ಕೀರ್ತಿ ಐಶ್ವರ್ಯವನ್ನು ಹಾಳುಮಾಡಿದ ಪುತ್ರರತ್ನರು ಎಷ್ಟಿಲ್ಲ ? ಮನೆಯ ಕೀರ್ತಿಯನ್ನು ಬೆಳಗಿಸಿದ ಹೆಣ್ಣುಮಕ್ಕಳು ಎಷ್ಟಿಲ್ಲ ? ಉದಾ: ಇಂದಿರಾ ಗಾಂಧಿ, ಸರೋಜಿನಿ ನಾಯ್ಡು, ಮದರ್ ಥೇರೆಸಾ, ಅಮೃತಾ ಪ್ರೀತಮ್, ಬಚೇಂದ್ರಿ ಪಾಲ್, ದೇವಿಕಾ ರಾಣಿ, ಪಿ.ಟಿ. ಉಷಾ ಒಬ್ಬರೇ ಇಬ್ಬರೇ ?

ತುಂಡು ಟವಲ್ಲಿನಲ್ಲಿ ತೊಡೆಗಳನ್ನು ಪ್ರದರ್ಶಿಸುವ ಜಾಹೀರಾತು ಈಗ ಎಲ್ಲ ಪತ್ರಿಕೆಗಳಲ್ಲಿ ಬಣ್ಣಗೆಳಲ್ಲಿ ಕಣ್ಣಿಗೆ ರಾಚುತ್ತದೆ. ಸಂಸ್ಕೃತಿಕಲೆ ಮುಂತಾಗಿ ಮಾತಾಡುವ ಪತ್ರಿಕೆಗಳೂ ಅಂಥ ಚಿತ್ರಗಳನ್ನು ಪ್ರಕಟಿಸುತ್ತಿವೆ. ಆ ಮಾಡೆಲ್‌ನ ದೇಹಪ್ರದರ್ಶನದ ಮೂಲಕ ಅವರೇನು ಹೇಳಲು ಹೊರಟಿದ್ದಾರೆಂಬುದೇ ತಿಳಿಯುವದಿಲ್ಲ. ಟವೆಲ್‌ನ ಅವಶ್ಯಕತೆ ಬರೀ ಮಹಿಳೆಯರಿಗೆ ಇರುತ್ತದೆಯೇ ?

ಇನ್ನೊಂದು ಜಾಹೀರಾತು ಸೂಟ್‌ಕೇಸಿನದು. ಸೂಟ್‌ಕೇಸಿನ ಮೇಲೆ ಮಲಗಿದ ಅರೆನಗ್ನ ಹೆಣ್ಣು. ಸೂಟ್‌ಕೇಸಿಗೂ ಅರೆನಗ್ನ ಹೆಣ್ಣಿಗೂ ಏನು ಸಂಬಂಧ ? ಕೇವಲ ತಮ್ಮ ಕಂಪನಿಯ ವಸ್ತುವಿನತ್ತ ಎಲ್ಲರ ಗಮನ ಸೆಳೆಯಲೆಂದೇ. ಇದು ಹೆಣ್ಣಿನ ದೇಹವನ್ನು ನಮ್ಮ ಮಾಧ್ಯಮಗಳು ಉಪಯೋಗಿಸಿಕೊಳ್ಳುವ ರೀತಿ. ಕೆಟ್ಟ ಅತ್ತೆ, ಕುಳಿತು ತಿನ್ನುವ ಮನೆ ಮಂದಿ, ಬೆವರು ಸುರಿಸುತ್ತ ಅಡುಗೆ ಮಾಡುವ ಅವಳು. ಒಂದೇ ಎರಡೇ ? ಅವಳ ವ್ಯಕ್ತಿತ್ವಕ್ಕೆ ಬೆಲೆ ಕೊಡುವ ಜಾಹೀರಾತುಗಳು ಇಲ್ಲವೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಕಡಿಮೆ. ಅಡುಗೆ ಮನೆಯ ಸಾಮಾನುಗಳಿಂದ ಹಿಡಿದು ಸಿಗರೇಟು, ಬ್ಲೇಡು ಮುಂತಾದ ಪುರುಷರು ಉಪಯೋಗಿಸುವ ವಸ್ತುಗಳ ಪ್ರಚಾರಕ್ಕೆ ಸ್ತ್ರೀಯರೇ ಬೇಕು. ಆದರೆ ನಡೆಸಿಕೊಳ್ಳುವ ರೀತಿ ಒಂದೇ.

ಇದನ್ನು ತಡೆಯುವದು ಸಾಧ್ಯವೇ ? ಇಂಥ ದೊಡ್ಡ ಉದ್ಯಮವೊಂದು ದೃಷ್ಟಿ ಬದಲಿಸುವದು ಸಾಧ್ಯವೇ ? ಎನ್ನುತ್ತ ಕುಳಿತುಕೊಳ್ಳದೇ ವಿದ್ಯಾವಂತ ಮಹಿಳೆಯರು ಅಕ್ಷೇಪಾರ್ಹ ಜಾಹೀರಾತುಗಳ ವಿರುದ್ಧ ಸಾಂಘಿಕವಾಗಿಯೂ ವೈಯಕ್ತಿಕವಾಗಿಯೂ ಬರೆದು ಪ್ರತಿಭಟನೆ ಸೂಚಿಸಬಹುದು. ಇದರಿಂದಾಗಿ ಹಲವು ಗ್ರಾಹಕರಾದರೂ ತಮ್ಮ ಸುಲಭ ಪ್ರಚಾರದ ತಂತ್ರಗಳಿಗೆ ಬಲಿಯಾಗಿಲ್ಲವೆಂಬುದು ಆ ಕಂಪನಿಗಳಿಗೆ ಮನದಟ್ಟಾಗುತ್ತದೆ.

●

–ರಾಜಶ್ರೀ ಹಿರೇಮಠ
ಬೆಳಗಾವಿ.

# ನಾನು !

ಅವನು ಬರುವನೆಂದು ಕಾಯುತ್ತಿದ್ದೆ ಹುರುಪಿನಲ್ಲಿ, ಉತ್ಸಾಹದಲಿ. ಎಷ್ಟೊಂದು ಮಾತುಗಳು ತುಂಬಿ ತುಳುಕಲು ಕಾಯುತ್ತಿದ್ದವು... ಅವನ ನೆನಪಿನ ಗುಂಗಿನಲಿ ಹಾಲುಕ್ಕಿ ಸುರಿದು stove ಗಬ್ಬಾದದ್ದು, Meetingನಲ್ಲಿ ನೀವೇನ ಹೇಳ್ತೀರಾ ಅಂದಾಗ ಏನು ಹೇಳಲು ಹೊಳೆಯದೆ ತಬ್ಬಿಬ್ಬಾಗಿದ್ದು, ಇಳಿಯುವ stopನಲ್ಲಿ ಇಳಿಯದೆ ಕೊನೆಯ stopವರೆಗೆ ಬಸ್ ಹೋಗುವವರೆಗೂ ಮೈಮರೆತು ಕುಳಿತದ್ದು, ಅವನು ಬರೆದ ಕವನದ ಸಾಲಿನಲಿ ಅವಳು ಸುಳಿದಾಡಿದುಕಂಡು ಬೀಗಿದ್ದು... ಒಂದೇ, ಎರಡೆ, ನೂರು, ಸಾವಿರ ಮಾತುಗಳು.

ಹೊಳೆಯುವಂತೆ ತೊಳೆದ ಕೊದಲಲಿ ವಾಸನೆ ಹರಡಲೆಂದು ಮೊಳಮಲ್ಲಿಗೆ ಮುಡಿದು, ಅವನ ಮೆಚ್ಚಿನ ಬಣ್ಣದ ಸೀರೆಯುಟ್ಟು ಕಾದು ನಿಂತಿದ್ದಳು. ಸೀರೆ ಅವನಿಗೆ ಮೆಚ್ಚು. ಅದೂ ಅವನ ಮೆಚ್ಚಿನ ಬಣ್ಣ ! ಮೈಸುತ್ತಿ ನಿಂತ ಸೀರೆ. ಅವನೆ ಸುತ್ತಿ ನಿಂತಂತೆನಿಸಿ ನವಿರಾಗಿ ಕಂಪಿಸಿದಳು. ಮೋಡಿಯ ಜೋಡಿಕವನಗಳು, ಸೊಗಸಾದ ಚಿತ್ರ ಬರೆದು ತಂದಿದ್ದಳು. ಕವನ ಓದಬೇಕು, ಚಿತ್ರ ತೋರಿಸಬೇಕು. ತೋರುವ ಮೊದಲು ವಿಮರ್ಶೆ, analysis ಬೇಡ ಎನ್ನಬೇಕು. ರಾತ್ರಿ ಒಂದರವರೆಗೂ ಎದ್ದು ಮಾಡಿದ್ದ ಅವನ ಮೆಚ್ಚಿನ ಸಿಹಿತಿಂಡಿಯ ತಿನ್ನಲು ಹೇಳಿ ಮೆಚ್ಚುಗೆಯ ನೋಟ ಕಾಣಬೇಕು ಅಯ್ಯೋ ! ಎಷ್ಟೊತ್ತಿಗೆ ಬರ್‍ತಾನಪ್ಪ ? ಆಸಾಮಿ, ಕಾಯೋದು ಕಷ್ಟ ಆಗ್ತಾ ಇದೆ.

ಅವನ ಸುಳಿವೆ ಇಲ್ಲ ! ತಿಂಡಿಯ ಡಬ್ಬದ ಭಾರಕ್ಕೆ ಭುಜ ಜಗ್ಗುತ್ತಿತ್ತು. ಅವನು ಬರುವ ಹಾದಿಯ ನೋಡಿ ನೋಡಿ ಕಣ್ಣು ಸೋತವು, ಬಿಸಿಲಿನ ಝಳ ಜೊತೆಗೆ ಸೀರೆ! ಶೆಕೆಗೆ ಮೈ ಉರಿಯಿತು. ಸಿಂಗರಿಸಿಕೊಂಡು ನಿಂತ ಹೆಣ್ಣು. ಬೀದಿಕಾಮಣ್ಣರು. ಎಷ್ಟೊತ್ತಿಗೆ ಬರ್‍ತಾನಪ್ಪ, ಈ ಪೋಲಿಗಳ ಕಾಟ ಸಹಿಸೋದು ಹೇಗೆ ?

ಬರೋ ವಾಸನೇನೆ ಇಲ್ಲ! ಥೂತ್ ತೆರೀಕೆ, ನಾನು ದಡಬಡಿಸಿಕೊಂಡು ಬರೋದು, ಅವನು ಮಾಮೂಲಿ ಬರೋ ಟೈಮಿಗೆ ಬರೋದು, ನನಗ್ಯಾಕೆ ಈ ಹುಚ್ಚು ? ಹೂಂ ! ಹುಚ್ಚೇ ಸರಿ. ಇಲ್ಲಾಂದ್ರೆ ಬರಿ ಅವನು ಮೆಚ್ಚಿದ್ದನ್ನೇ ಮಾಡ್ತಾ ಇದ್ನಾ ? ಹೌದು ಎಲ್ಲಾ ಅವನಿಗೆಂದು, ಅವನ ಮೆಚ್ಚುಗೆಗೆಂದೆ, ಸೀರೆ ಅವನಿಗಿಷ್ಟ, ಬಣ್ಣ ಅವನಿಗಿಷ್ಟದ್ದು ಸಿಹಿ ತಿಂಡಿ ಅವನಿಗಿಷ್ಟವಾದದ್ದು, ಮಲ್ಲಿಗೆ ಹೂ ಅವನ ಮೂಗಿಗೆ ಗಂ ಎನಲೆಂದು. ಆರೆ ನನಗೆಂದು, ನಂದೆಂದು ಏನು ? ಯೋಚಿಸುತ್ತಾ ನಿಂತೆ. ಕಾಲು ಸೋತವು. ಸಿಟ್ಟು ನೆತ್ತಿಗೇರಿತು. ಹೌದು ನಂದೆಂದು ನನಗೆಂದು... ಏನು ?

ಯೋಚಿಸುತ್ತಾ ಅವನು ಬಂದದ್ದೆ ತಿಳಿಯಲಿಲ್ಲ. ಬಳಿಗೆ ಬಂದು ಹೆಗಲಿಗೂ ಕೈ ಹಾಕಿದ, ಸಲಿಗೆಯ ಮಾತಾಡಿದ.

ನಂದೆಂದು...... ಏನು ? ಹಾಂ ! ಆ ಜೋಡಿ ಕವನಗಳು ನನ್ನವು. ಟ್ರಿಕ್ಕಿಗೆಂದು ಹೋದಾಗ ಬರೆದದ್ದು, ಆ ಮೌನ ಗಂಭೀರ ಹಿಮಾಲಯ ಬೆಟ್ಟಗಳನ್ನು ನೋಡಿ ದಂಗಾಗಿ ಬರೆದದ್ದು, ಜ್ವರದ ಕಾವಿಗೆ ಸುಸ್ತಾಗಿ, ಬಾಯ್ತೆರೆದು ಮಲಗಿದ್ದ ಮಗುವಿನ ಮುಖದ ತುಂಬಾ ನೊಣಗಳು! ಅದನ್ನು ನೋಡಿ ಬರೆದದ್ದು.

ಆ ಚಿತ್ರ ! ರಾತ್ರಿ ಒಬ್ಬಳೆ ಕುಳಿತು ರೇಷ್ಮಳ ಹಾಡಿನಲ್ಲಿ ತೇಲಿ ಹೋದಾಗ ಬರೆದದ್ದು. ಆದಿನ ಕತ್ತಲಿಗೆ ಬೆದರಿದ್ದು ಭಯದ ಗೆರೆಗಳು ಹಾಳೆಯ ಮೇಲೆ ಮೂಡಿದ್ದವು.

ಮನೆಯ ಮುಂದೆ ಎಳೆದ ರಂಗೋಲಿಯ ಎಳೆಗಳು ನನ್ನವು. ಬಿಳಿಯ ಬಟ್ಟೆಯ ಮೇಲೆ ಮಣ್ಣಿನ ಬಣ್ಣದ ಹೂಗಳಿದ್ದ ಫ್ರಾಕು ನನಗೆಂದು ಹೊಲಿಸಿ ಕೊಂಡಿದ್ದು. ಹೌದು ಇವೆಲ್ಲ ನನ್ನವು, ನನ್ನವು ಮನ ಬೀರುತಿತ್ತು.

"ಏನಮ್ಮ ಮಾತಾಡ್ತನೇ ಇದೀನಿ, ನೀನು ನನ್ನ Presence ನೇ Care ಮಾಡ್ದೇ ಏನೂ ಯೋಚಿಸ್ತಾನೇ ಇದೀಯ ?"ರೇಗಿದ ಅವನು. ಅಬ್ಬಾ ಎರಡು ಕ್ಷಣಾ ನಂದೇ ಪ್ರಪಂಚದ್ದಲ್ಲದ್ರೆ, ಎಷ್ಟು ಸಿಟ್ಟು ಇವನಿಗೆ, ಎಷ್ಟು insult ಆಗುತ್ತೆ. ಇವನು ಬಂದ ಕೂಡ್ಲೆ ಮುಖ ಅರಳಬೇಕು. ಇವನ ಮಾತನ್ನ ಕಣ್ಣರಳಿಸಿ, ಕಿವಿ ತೆರೆದು ಕೇಳಬೇಕು.

ಇವನ ಕವಿತೆಗೆ ಬೆರಗಾಗಬೇಕು. ಮೈಮನ ಸಂಪೂರ್ಣವಾಗಿ ಸ್ಪಂದಿಸಬೇಕು. ನನ್ನ ಬಗ್ಗೆ ಕೇಳೊ ಉತ್ಸಾಹ ಕೊಂಚವೂ ಇಲ್ಲ.

ಬೆವರಿಂದ ನೆಂದ ಅವನ ಕೈ ತಣ್ಣಗೆ ಹಾವೆನಿಸಿ ಕೊಡವಬೇಕೆನಿಸಿತು. ಅವನ ವಾಸನೆ ಗಚ್ಚೆನಿಸ ತೊಡಗಿತು.

ಏಯ್ ! ಈ ಶೆಕೆಗೆ ಸೀರೆ ತುಂಬಾ uncomfortable ಅನ್ನಿಸ್ತಿದೆ, ಮನೆಗೆ ಹೋಗಿ change ಮಾಡ್ಕೊಂಡು ಬರ್ತೀನಿ.

ಏನಮ್ಮಾ ಬಂದ ತಕ್ಷಣಾ ಹೋಗ್ತಾ ಇದೀಯ ?

ಇಲ್ಲ ತಿರ್ಗ ಬರ್ತೀನಿ

ಎಷ್ಟೊತ್ತಿಗೆ ? ಎಲ್ಲಿಗೆ ?

ಅದೇ ಮಾಮೂಲಿ ಜಾಗಕ್ಕೆ, I hour ಒಳಗೆ ಬಂದ್ಬಿಡ್ತೀನಿ. ಲೇಟಾದ್ರೆ ಕಾಯಬೇಡ ಹೋಗ್ಬಿಡು. ಸರಸರನೆ ಹೊರಟಳು.

ಅವನು ದಂಗಾಗಿ ನಿಂತ.

ಅಬ್ಬಾ 78 ಬಂತು. ಒಳ್ಳೆ ಗಳಿಗೇಲಿ ಎದ್ದಿರಬೇಕು ಸೀಟೂ ಸಿಕ್ತು. ಸಮಾಧಾನವಾಗಿ ಕುಳಿತೆ. ಗಂಟೆ ಇನ್ನೂ ಹತ್ತು ಮನೆಗೆ ಹೋಗಿ ಫಸ್ಟ್ gas book ಮಾಡ್ಬೇಕು. ಲೈಟ್ ಬಿಲ್ ಕಟ್ಬೇಕು, ಗೋಧಿ ಮಿಲ್‌ಗೆ ಹಾಕ್ಸಿ Ration card ಲ್ಲಿ ಸಕ್ಕರೆ ತರಬೇಕು. ಚಕ ಚಕಾಂತ ಇವತ್ತೆಲ್ಲಾ ಮುಗಿಸ್‌ಬೇಕು. ತಿಂಗಳ ಕೊನೆವರೆಗೂ ಆರಾಮವಾಗಿರಬೌದು. ಉತ್ಸಾಹ ಮೈಯೆಲ್ಲಾ ತುಂಬಿಕೊಂಡು ಬಸ್ಸಿಳಿದೊಡನೆ ಮನೆಗೆ ಓಡಿದೆ. ಗೋಧಿ ಡಬ್ಬ ಬುಟ್ಟಿಯಲ್ಲಿಟ್ಟುಕೊಂಡು ಸಕ್ಕರೆಗೊಂದು ಚೀಲ ತಗೊಂಡು, gas agency Phone No. ತಗೊಂಡು, ಲೈಟ್ ಬಿಲ್ ಪರ್ಸ್ ಹಿಡ್ಕೊಂಡು ಸರಸರ ಮೆಟ್ಟಿಲಿಳಿದು, ಗೇಟುದಾಟಿ, ರಸ್ತೆಗಿಳಿದೆ.

●

**ಸರಸ್ವತಿ ದು.**

---

# ಕಾಡುಮಲ್ಲಿಗೆಯಂತಿರುವ ಸೇ. ಸುಮಿತ್ರಾ ನೇ. ಇಂಚಲ

ಕಳೆದ ವರುಷವಷ್ಟೇ ತನ್ನ ಬೆಳ್ಳಿ ಹಬ್ಬವನ್ನು ಆಚರಿಸಿಕೊಂಡಿರುವ ಬೆಳಗಾವಿಯ ಕಿಲ್ಲೆಯ ದ್ವಾರದೆದುರು ನಗರದ ಹೆಬ್ಬಾಗಿಲಿಗೆ ಒಳ್ಳೆಯ ಅಭಿಮಾನದಿಂದ ಪ್ರದರ್ಶನ ಗೈಯುವ ಡಿ. ವಾಯ್ ಬೇಗಲೆ ಭರತೇಶ ಹೈಸ್ಕೂಲಿನ ಈ ಸ್ವರೂಪಕ್ಕೆ ಕಾರಣಕರ್ತೆಯಾದವರಲ್ಲಿ ಪ್ರಮುಖರು ಸೇ ಸುಮಿತ್ರಾ ನೇ ಇಂಚಲರು. ತಂದೆಯವರಾದ ಕೈ ಧರ್ಮರಾಜ ಕೊಳವಿಯವರಿಗೆ ತಮ್ಮ ಉಳಿಕೆಯ ಐವತ್ತು ಸಾವಿರದಾ ಐದು ನೂರಾಐವತ್ತೈದು ರೂಪಾಯಿಗಳ ಬೃಹತ್ ದಾನವನ್ನು ಬೆಳಗಾವಿ ಜನತಾ ಶಿಕ್ಷಣ ಸಮಿತಿಗೆ ಇಪ್ಪತ್ತು ವರುಷಗಳಷ್ಟು ಹಿಂದೆಯೇ ಈಯುವಂತೆ ಮಾಡಿ ಈ ಸಂಸ್ಥೆಯ ಇಂದಿನ ಸ್ಥಿತಿಗೆ ಕಾರಣಕರ್ತೆಯರಾಗಿದ್ದಾರೆ. ಸಾಮಾಜಿಕ ಕಾರ್ಯದಲ್ಲಿಯೇ ತಮ್ಮ ಆಯುಷ್ಯವನ್ನು ಕಳೆದ ಧರ್ಮರಾರ ಕೊಳವಿಯವರ ಇಬ್ಬರು ಹೆಣ್ಣು ಮಕ್ಕಳಲ್ಲಿ ಹಿರಿಯರಾಗಿರುವರು.

ಶಿಕ್ಷಣ ಇಲಾಖೆಯಲ್ಲಿ ಶಿಕ್ಷಕರಾಗಿ, ಶಿಕ್ಷಣಾಧಿಕಾರಿಯಾಗಿ ಸೇವೆ ಸಲ್ಲಿಸಿದ ಪತಿಯೊಡನೆ ರಾಜ್ಯದ ಹಲವಾರು ಸ್ಥಳಗಳನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು ದುಡಿದಿರುವರು. ಬಡ ಮಕ್ಕಳಿಗೆ ಸಹಾಯ ನೀಡಿರುವರು. ಈ ವರೆಗೆ ಸುಮಾರು ಒಂದೂವರೆ ಲಕ್ಷ ಹಣವನ್ನು ವಿದ್ಯಾ ಸಂಸ್ಥೆಗಳು, ಕಲ್ಯಾಣ ಮಂಟಪಗಳಿಗೆ ದಾನವನ್ನಿತ್ತು ತಮ್ಮ ನಿರ್ವಹಣೆಗಾಗಿ ನಾಮಪತ್ರ ಸಂಚಿತ ಹಣವನ್ನು ಇಟ್ಟುಕೊಂಡಿದ್ದಾರೆ. ಒಂದು ಶಿಶುವಿಹಾರವನ್ನು ಆರಂಭಿಸಿದ್ದು ಅದನ್ನೀಗ ಬಿಟ್ಟುಕೊಟ್ಟಿದ್ದಾರೆ. ದಾನವನ್ನಷ್ಟೇ ಅಲ್ಲದೇ ಅನೇಕ ಧಾರ್ಮಿಕ ವಿಧಿ ವಿಧಾನಗಳು, ಉಪವಾಸ ವ್ರತಗಳನ್ನು ಮಾಡಿದ್ದಾರೆ. ಇದರಿಂದಾಗಿ ಮನೆಯಲ್ಲೂ ಹೊರಗೂ ಜನಪ್ರಿಯರಾಗಿದ್ದಾರೆ. ಸಮಾಜ ಸೇವೆಯಲ್ಲಿ ತೊಡಗುವ ಇಂದಿನ ಯುವತಿಯರಿಗೆ ಶುದ್ಧ ಚಾರಿತ್ರ್ಯವುಳ್ಳ, ಸದಾ ಚಟುವಟಿಕೆಯ ಸೀ. ಪದ್ಮಾವತಿ ಸ್ಫೂರ್ತಿದಾಯಕವಾಗಿದ್ದಾರೆ.

ಅರವತ್ನಾಲ್ಕು ವರ್ಷದ ಇವರು ಸಾಮಾನ್ಯರಂತೆ ಬದುಕಿ ಸಾಮಾನ್ಯರಿಗಾಗಿ ಬದುಕಿ ತಮ್ಮ ಜೀವನವನ್ನು ಸಾರ್ಥಕಗೊಳಿಸಿಕೊಂಡಿರುವರು.

●

**—ಪ್ರಿಯಾ ಪಾಟೀಲ**

# ಕಪ್ಪಿಟ್ಟ ಹುಡುಗಿ

ಹಾಲ ಹೆಪ್ಪಿಟ್ಟಳೋ, ಹುಡುಗಿ
ಮೊಸರನ್ನ :
ಉಂಡಳೋ, ಬಿಟ್ಟಳೋ ಯಾರಿಗೆ ಗೊತ್ತು ?
ಕಪ್ಪಿಟ್ಟಳೋ ಹುಡುಗಿ
ಕತ್ತಲೆಯ ಕೋಣೆಯು
ತೆರೆದಿಟ್ಟಳೋ ; ಮುಚ್ಚಿದ್ದಳೋ ಯಾರಿಗೆ ಗೊತ್ತು ?
ಮೈ ಬಿಟ್ಟಳೋ, ಹುಡುಗಿ
ಒಡಲ ಪಸೆಗೆ ಹಸಿಯಾದಳೋ...
ಕರಗಿದಳೋ, ಹುಡುಗಿ
ನವೆಯೆದ್ದು ತತ್ತರಿಸಿದಳೋ ಯಾರಿಗೆ ಗೊತ್ತು ?

ಚುಕ್ಕಿ ; ಹುಡುಗಿ
ಚಂದ್ರನ ನಂಟು ಹುಡುಕುತ್ತಾ
ಎಡವಿ ಬಿದ್ದಳೋ ಯಾರಿಗೆ ಗೊತ್ತು ?
ಬಸಿರ ಹೊತ್ತಳೋ ಹುಡುಗಿ
ನೋವ ಕಕ್ಕಿದಳೋ, ನಂಜು ಕಾರಿದಳೋ
ಯಾರಿಗೆ ಗೊತ್ತು... ?
ಕೂತಲ್ಲೇ ಸ್ರವಿಸಿದಳೋ
ಜೇನ - ಬಯಕೆಗಳ ಸಿಡಿಪಟಾಕಿಯು
ಕಿಡಿಹೊತ್ತು ಉರಿದಳೋ, ಯಾರಿಗೆ ಗೊತ್ತು... ?

ಅಡಗಿದಳೋ ಚಿಪ್ಪೊಳಗೆ ;
ಚಿಪ್ಪೊಳಗೆ ಮುತ್ತಾದಳೋ-
ಕ್ರಿಮಿಯಾದಳೋ ಯಾರಿಗೆ ಗೊತ್ತು... ?

—ನಿರ್ಮಲಾ ಆನವಟ್ಟಿ

## ಇಸಡೊರ ಡಂಕನ್

ನೃತ್ಯ ಕಲಾವಿದೆಯಾದ ಇಸಡೊರ ಡಂಕನ್ 1878ರ ಮೇ 27ರಂದು ಅಮೆರಿಕೆಯ ಸಾನ್‌ಫ್ರಾನ್ಸಿಸ್ಕೋದಲ್ಲಿ ಜನಿಸಿದಳು. ಈಕೆಯ ತಂದೆ ತಾಯಿ ಬಡವರಾದರೂ ಕಲಾಪ್ರೇಮಿಗಳು. ಇಸಡೊರ ಆರು ವರ್ಷದವಳಿದ್ದಾಗಲೇ ನಾಟ್ಯಾರಂಭ ಮಾಡಿದಳು. ಬ್ಯಾಲೆ, ನಾಟ್ಯದ ಹಲವು ಪಾಠಗಳನ್ನು ಆಕೆ ಕಲಿತ ಮೇಲೆ, ಅಂಗಾಂಗಗಳ ಚಲನವಲನ ಸಹಜವಾಗಿರುವಂಥ ನಾಟ್ಯವನ್ನೇ ಅಭ್ಯಸಿಸುವುದಾಗಿ ನಿರ್ಧರಿಸಿದಳು. ನಾಟ್ಯವೃತ್ತಿಯನ್ನು ಸೃಜನಕಲೆಯನ್ನಾಗಿ ಬದಲಿಸುವ ಪಣತೊಟ್ಟಳು.

ಮೊದಲಿಗೆ ಇಸಡೊರ ಷಿಕಾಗೊ ಮತ್ತು ನ್ಯೂಯಾರ್ಕ್‌ಗಳಲ್ಲಿ ಪ್ರದರ್ಶನಗಳನ್ನು ನೀಡಿದಳು. ಅನಂತರ ನಾಟ್ಯ ಪ್ರದರ್ಶನದ ಉದ್ದೇಶವನ್ನಿಟ್ಟುಕೊಂಡು ಯುರೋಪಿಗೆ ಬಂದಳು. 1902ರಲ್ಲಿ ಫ್ರಾನ್ಸಿನ ಪ್ಯಾರಿಸ್ಸಿನಲ್ಲಿ ಪ್ರದರ್ಶನ ನೀಡುವವರೆಗೆ ಅವಳ ವೈಶಿಷ್ಟ್ಯ ಜನರಿಗೆ ಮನವರಿಕೆ ಆಗಲಿಲ್ಲ. ಅನಂತರ ಹಂಗೇರಿ, ಜರ್ಮನಿ ರಷ್ಯ ಮುಂತಾದ ದೇಶಗಳಲೆಲ್ಲ ಸಂಚರಿಸಿದಳು.

ಇಸಡೊರ ಡಂಕನ್ ಸಂಗೀತಕ್ಕೆ ನಾಟ್ಯದ ಮೂಲಕ ವಿವಿಧ ವ್ಯಾಖ್ಯೆಗಳನ್ನು ನೀಡಿದಳು. ಪ್ರಾಚೀನ ಗ್ರೀಕ್ ನಾಟ್ಯ ಪದ್ಧತಿಯಿಂದ ಸ್ಫೂರ್ತಿ ಪಡೆದು ಸಂಗೀತಕ್ಕೆ ಬೇರೆ ಬೇರೆ ರೀತಿಯ ಅಭಿನಯವನ್ನು ಅಳವಡಿಸಿದಳು. ಪಾದರಕ್ಷೆಯಿಲ್ಲದೆ ಬರಿಗಾಲಿನಲ್ಲಿ ನರ್ತಿಸುವುದು ; ಗ್ರೀಕ್ ಶಿಲ್ಪಗಳಲ್ಲಿರುವಂಥ ಅಳ್ಳಕವಾದ ನವಿರು ಉಡುಪನ್ನು ಧರಿಸುವುದು- ಮುಂತಾದುವನ್ನು ಆಕೆ ಆಚರಣೆಗೆ ತಂದಳು. ಆ ಕಾಲಕ್ಕೆ ಅವು ಕ್ರಾಂತಿಕಾರಕವಾಗಿದ್ದವು. ಹೀಗೆ ಪರಂಗರಾನುಗತ ಸೂತ್ರಗಳ ಹಾಗು ಜಡವಾಗಿದ್ದ ಕಟ್ಟುಪಾಡುಗಳ ವಿರುದ್ಧ ಬಂಡಾಯವೆದ್ದು, ಪಾಶ್ಚಾತ್ಯ ನಾಟ್ಯರಂಗದ ಇತಿಹಾಸದಲ್ಲಿ ಹೊಸ ಅಧ್ಯಾಯವನ್ನು ತೆರೆಯುವ ಮೂಲಕ ಕ್ರಾಂತಿಕಾರಿ ನೃತ್ಯಕಲಾವಿದೆ ಎನಿಸಿಕೊಂಡಳು.

ಇಸಡೊರ 49ನೇ ವಯಸ್ಸಿನಲ್ಲಿ 1927 ಸೆಪ್ಟಂಬರ್ 14ರಂದು ಮರಣಹೊಂದಿದಳು. ಅವಳು ಕತ್ತಿಗೆಗೆ ಸುತ್ತಿ ಕೊಂಡಿದ್ದ ಉದ್ದನೆಯ ವಸ್ತ್ರದ ಕೊನೆ ಆಕೆ ಕುಳಿತ್ತಿದ್ದ ಮೋಟಾರಿನ ಚಕ್ರಕ್ಕೆ ಸಿಲುಕಿದ್ದರಿಂದ ಕುತ್ತಿಗೆ ಬಿಗಿದು ಉಸಿರುಕಟ್ಟಿ ಮೃತಳಾದಳು.

ಕೃಪೆ : ಜ್ಞಾನ ಗಂಗೋತ್ರಿ

## ಪರ್ಲ್‌ಬಕ್

ಅಮೇರಿಕದ ಖ್ಯಾತ ಕಾದಂಬರಿಕಾರ್ತಿ, ಪರ್ಲ್‌ಬಕ್, ಹುಟ್ಟಿದ್ದು ಅಮೆರಿಕದಲ್ಲಾದರೂ ತನ್ನ ಜೀವನದ ನಲವತ್ತೆರಡು ವರ್ಷಗಳನ್ನು ಆಕೆ ಕಳೆದದ್ದು ಚೀನದಲ್ಲಿ, ಮಾತೃಭಾಷೆ ಇಂಗ್ಲಿಷನ್ನು ಕಲಿಯುವುದಕ್ಕೆ ಮೊದಲೇ ಅವಳು ಚೀನೀ ಭಾಷೆಯಲ್ಲಿ ಮಾತನಾಡುತ್ತಿದ್ದಳು. ಇವಳ ಸ್ನೇಹಿತರೆಲ್ಲಾ ಚೀನಿಯರೇ. ಇವಳ ಅತಿ ಶ್ರೇಷ್ಟ ಕಾದಂಬರಿ 'ದಿ ಗುಡ್ ಅರ್ತ್'-ಒಂದು ಚೀನೀ ರೈತ ಕುಟುಂಬದ ಕಥೆ. ಇವಳ ತಂದೆ-ತಾಯಿಯರು ಚೀನದಲ್ಲಿ ಕ್ರೈಸ್ತಧರ್ಮ ಪ್ರಚಾರಕರಾಗಿದ್ದರು. ಪರ್ಲ್‌ಬಕ್ ತನ್ನ ಪ್ರಾಥಮಿಕ ವಿದ್ಯಾಭ್ಯಾಸವನ್ನು ಚಿಂಕಿಯಾಂಗ್ ಹಾಗು ಷಾಂಘಾಯ್‌ಗಳಲ್ಲಿ ಮಾಡಿದಳು. ಶಾಲೆಯಲ್ಲಿ ಚೀನೀ ಭಾಷೆಯನ್ನು ಮನೆಯಲ್ಲಿ ಇಂಗ್ಲಿಷ್ ಭಾಷೆಯನ್ನು ಕಲಿತಳು. ಕಾಲೇಜು ಶಿಕ್ಷಣವನ್ನು ಅಮೆರಿಕದಲ್ಲಿ ಮುಗಿಸಿ 1817ರಲ್ಲಿ ಚೀನಾಕ್ಕೆ ಮರಳಿ ಬಂದಳು. ಮುಂದೆ ಮದುವೆಯ ನಂತರ ಉತ್ತರ ಚೀನದ ಸಣ್ಣ ಪಟ್ಟಣದಲ್ಲಿ ನೆಲೆಸಿದಳು. ಈ ಪ್ರದೇಶದ ಜನಜೀವನವೇ ಅವಳ 'ಗುಡ್ ಅರ್ತ್' ಕಾದಂಬರಿಯ ಕಥಾವಸ್ತು.

1921ರಿಂದ ಹತ್ತು ವರ್ಷಗಳ ಕಾಲ ನಾನ್‌ಕಿಂಗ್ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕಿಯಾಗಿದ್ದಳು. ನಾನ್‌ಕಿಂಗ್‌ನಲ್ಲಿದ್ದ ಅವಧಿಯಲ್ಲಿ ಅನೇಕ ಲೇಖನ, ಕಥೆಗಳನ್ನು ಬರೆದು ಪ್ರಕಟಿಸಿದ್ದಳು. 1930ರಲ್ಲಿ ಈಕೆಯ 'ಈಸ್ಟ್ ಎಂಡ್ ವೆಸ್ಟ್ ಎಂಡ್' ಕಾದಂಬರಿ ಪ್ರಕಟವಾಯಿತು. 1932ರಲ್ಲಿ 'ಸನ್ಸ್', 1936ರಲ್ಲಿ 'ಎ ಹೌಸ್ ಡಿವೈಡೆಡ್', 1940ರಲ್ಲಿ 'ಅದರ್ ಗಾಡ್ಸ್', 1942ರಲ್ಲಿ 'ಡ್ರೇಗನ್ ಸೀಡ್' ಕಾದಂಬರಿಗಳನ್ನು ಬರೆದಳು. ಈ ಕಾದಂಬರಿಗಳಲ್ಲದೆ 'ಫೈಟಿಂಗ್ ಏಂಜಲ್' ಮತ್ತು ದಿ ಎಕ್ಸೈಲ್ ಎಂಬ ಅವಳ ತಂದೆತಾಯಿಯರ ಜೀವನ ಚರಿತ್ರೆಯನ್ನು ಕುರಿತ 'ಫೈಟಿಂಗ್ ಏಂಜಲ್ ಮತ್ತು ದಿ ಎಕ್ಸೈಲ್' ಎಂಬ ಪುಸ್ತಕವನ್ನು 'ಮೈಸೆವರಲ್ ವರ್ಲ್ಡ್ಸ್' ಎಂಬ ಆತ್ಮಕಥೆಯನ್ನು ಭರೆದಿದ್ದಾಳೆ. ಇವಳು ಬರೆದ 'ಗುಡ್ ಅರ್ತ್' ಕಾದಂಬರಿಯಲ್ಲಿನ ಚೀನಿ ದೈವ ಜೀವನದ ನೈಜಮನೋಜ್ಞ ಚಿತ್ರಣಕ್ಕಾಗಿ ಹಾಗು ಅಮೋಘ ಜೀವನ ಚಿತ್ರಗಳಿಗಾಗಿ 1932 ಪುಲಿಟ್ಜರ್ ಪ್ರಶಸ್ತಿ ಹಾಗು 1938ರಲ್ಲಿ ನೋಬೆಲ್ ಪ್ರಶಸ್ತಿ ದೊರೆಯಿತು. ಈ ಗೌರವ ಪಡೆದ ಪ್ರಥಮ ಅಮೆರಿಕನ್ ಮಹಿಳೆ ಪರ್ಲ್‌ಬಕ್.

ಕೃಪೆ : ಜ್ಞಾನ ಗಂಗೋತ್ರಿ

ಪ್ರಿಯರೇ,

ಬಿ.ಟಿ.ಎಸ್. ಬಸ್ಸುಗಳಲ್ಲಿ ಮಹಿಳೆಯರಿಗಾಗಿ ಎಂಬ ಸ್ಥಾನ ಕಾಯ್ದಿರಿಸುವ ಮೀಸಲಾತಿ ವ್ಯವಸ್ಥೆ ಕಾಯ್ದೆಯ ರೂಪದಲ್ಲಿ ಜಾರಿಗೆ ಬಂದಾಗಿನಿಂದ ಬಸ್ಸುಗಳಲ್ಲಿ ಸಾಮಾನ್ಯವಾಗಿ ನಾವೂ–ನೀವೂ ಜಗಳ – ದೊಂಬಿಗಳನ್ನು ನೋಡುತ್ತಲೇ ಇರುತ್ತೇವೆ. ಮೊದ ಮೊದಲು ಈ ಬಗ್ಗೆ ಬಸ್ಸುಗಳಲ್ಲಿ ಉಸಿರೆತ್ತುತ್ತಿದ್ದ ನಾವೆಲ್ಲರೂ ಈಗ ಅವಮಾನಗಳಿಂದಾಗಿ / ಒರಟುತನಗಳಿಂದಾಗಿ ಅಥವಾ ಇನ್ನಾವುದೋ ರೀತಿಯ ಘರ್ಷಣೆಗಳಿಂದಾಗಿ ಬಾಯಿ ಮುಚ್ಚಿಕೊಂಡು ನಿಂತುಕೊಂಡೇ ಪ್ರಯಾಣಿಸುತ್ತೇವೆ. ಈ ಮೀಸಲಾತಿ ಅಗತ್ಯವಿದೆಯೇ? ಅಗತ್ಯವಿದ್ದರೆ ಇದರ ಬಗ್ಗೆ ನಾವೂ–ನೀವು ಏನು ಮಾಡಬಹುದು? ಈ ಬಗ್ಗೆ ನಿಮ್ಮ ಪ್ರತಿಕ್ರಿಯೆ ಅಗತ್ಯ. ಒಂದು ಸಂದರ್ಭದಲ್ಲಿ ಸಿಕ್ಕ ಸವಲತ್ತನ್ನು ಹೋರಾಡಿ ಉಳಿಸಿಕೊಳ್ಳದಿದ್ದರೆ ಮತ್ತೆ ಈ ಬಗ್ಗೆ ಧ್ವನಿ ಎತ್ತುವುದು ಸಾಧ್ಯವೇ? ನಿಮಗೆ ಏನೆನಿಸುತ್ತದೆ. ಖಂಡಿತಾ ಪ್ರತಿಕ್ರಿಯಿಸಿ.

—ಸಂಪಾದಕೀಯ ಮಂಡಳಿ

REGD. NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ.

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

PRINTED MATTER




C. G. MANJULA
9. 3rd CROSS
MARKHAM ROAD
ASHOK NAGAR
BANGALORE - 560025.

ವಿಳಾಸ :
"ಮಾನಸ"
ಪಂಚಾಯಿತಿ ರಸ್ತೆ,
ಕಾಡುಗೋಡಿ
ಬೆಂಗಳೂರು - 560 067